KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಡಿಸೆಂಬರ್ ೩, ೨೦೦೯ (ಮಾರ್ಗಶಿರ ೧೨, ಶಕ ವರ್ಷ ೧೯೩೧) | ಸಂಚಿಕೆ ೪೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಂಇ 299 ಬಿಎಸ್‌ಸಿ 2006, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ರಾಜ್ಯದಲ್ಲಿನ ಕಂದಾಯ ಇಲಾಖೆಯ ಗ್ರಾಮಲೆಕ್ಕಿಗರ ನೇರ ನೇಮಕಾತಿ ಮಾಡಲು 1977ರ ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಿ, ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 299 ಬಿಎಸ್‌ಸಿ 2006 ದಿನಾಂಕ: 03–02–2009ರಲ್ಲಿ ಪ್ರಕಟಿಸಿ ಅದರಂತೆ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ಅರ್ಜಿಯನ್ನು ಕರೆಯಲಾಗಿತ್ತು. ಸದರಿ ನಿಯಮಗಳಲ್ಲಿ ಪಿಯುಸಿ ಅಥವಾ ತತ್ಸಮಾನ ಹುದ್ದೆ ಎಂದು ವಿದ್ಯಾರ್ಹತೆ ನಿಗದಿ ಪಡಿಸಲಾಗಿತ್ತು. ತತ್ಸಮಾನ ಹುದ್ದೆ ಯಾವುದು ಎಂಬ ಬಗ್ಗೆ ಅಳವಡಿಸಿ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 299 ಬಿಎಸ್‌ಸಿ 2006 ದಿನಾಂಕ: 24–07–2009 ರಲ್ಲಿ ಪ್ರಕಟಿಸಲಾಗಿದೆ. ಪರಿಷ್ಕೃತ ನಿಯಮಗಳಂತೆ ನೇರ ನೇಮಕಾತಿ ಮಾಡಬೇಕಾಗಿರುವುದರಿಂದ ಈ ಹಿಂದೆ ನೇರ ನೇಮಕಾತಿ ಮಾಡಲು ಅರ್ಜಿ ಕರೆದಿರುವ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ರದ್ದುಪಡಿಸಿದೆ ಹಾಗೂ ಅರ್ಜಿದಾರರಿಂದ ಪಡೆದ ಅರ್ಜಿ ಶುಲ್ಕವನ್ನು ಅರ್ಜಿದಾರರಿಗೆ ಹಿಂತಿರುಗಿಸುವಂತೆ ತಿಳಿಸಲಾಗಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ–299 ಬಿಎಸ್‌ಸಿ 2006 ದಿನಾಂಕ: 24–7–2009 ರಂದು ಪ್ರಕಟಿಸಲಾಗಿರುವ ಗ್ರಾಮಲೆಕ್ಕಿಗರ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ರಾಜ್ಯದಲ್ಲಿನ ಭೂಮಿ ಕೇಂದ್ರಕ್ಕೆ ಮಂಜೂರಾಗಿರುವ ಒಟ್ಟು 1015 ಹುದ್ದೆಗಳನ್ನು ಹಾಗೂ ಎಲ್ಲಾ ಜಿಲ್ಲೆಗಳಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಎಲ್ಲಾ ಜಿಲ್ಲಾಧಿಕಾರಿಗಳು ನೇರ ನೇಮಕಾತಿ ಮೂಲಕ ಈ ಕೆಳಕಂಡ calendar of events ನಂತೆ ತುಂಬಲು ನಿರ್ದೇಶನ ನೀಡಲಾಗಿದೆ.

1) ಎಲ್ಲಾ ಜಿಲ್ಲಾಧಿಕಾರಿಗಳಿಗೆ ಅರ್ಜಿ ಕರೆಯಲು ನಿಗದಿ ಪಡಿಸಿದ ದಿನಾಂಕ: 26–09–2009 ಮತ್ತು ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 30–10–2009.
2) ಎಲ್ಲಾ ಜಿಲ್ಲಾಧಿಕಾರಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ದಿನಾಂಕ: 30–11–2009 ರಂದು ಪ್ರಕಟಿಸುವುದು.
3) ತಾತ್ಕಾಲಿಕ ಆಯ್ಕೆ ಪಟ್ಟಿಯಂತೆ ಅಭ್ಯರ್ಥಿಗಳು ಮೂಲ ದಾಖಲಾತಿಗಳೊಂದಿಗೆ ಪರಿಶೀಲನೆಗೆ, ಆಯಾ ಜಿಲ್ಲಾಧಿಕಾರಿಗಳ ಕಚೇರಿಗೆ ಹಾಜರಾಗಬೇಕಾದ ದಿನಾಂಕ: 15–12–2009.
4) ಎಲ್ಲಾ ಜಿಲ್ಲಾಧಿಕಾರಿಗಳು ಅಂತಿಮ ಪಟ್ಟಿಯನ್ನು ಪ್ರಕಟಿಸಬೇಕಾದ ದಿನಾಂಕ: 19–12–2009.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಪಿ.ಆರ್. 2299

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ವಿಷಯ:** ಶ್ರೀ ಮಹಮದ್ ಸೈಫುಲ್ಲಾ, ಹಿಂದಿನ ತಹಶೀಲ್ದಾರ್, ಬ್ಯಾಡಗಿ (ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ –ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಹಾವೇರಿ ರವರ ಪತ್ರ ಸಂ: ಸಿಬ್ಬಂದಿ(1)ಇವಿ, ವಹಿ–7/2006–07, ದಿನಾಂಕ:10–05–2007.
2. ಸರ್ಕಾರದ ಆದೇಶ ಸಂ: ಕಂಇ 36 ಎಡಿಇ 2007, ದಿನಾಂಕ: 27–02–200ರ ಕಾರಣ ಕೇಳುವ ನೋಟೀಸು.
3. ಶ್ರೀ ಅಹಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಕಾರಣ ಕೇಳುವ ನೋಟೀಸಿಗೆ ದಿನಾಂಕ:09.05.2008 ರಂದು ನೀಡಿದ ಸಮಜಾಯಿಷಿ.
4. ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2007, ದಿನಾಂಕ: 29–07–2008.
5. ದಿನಾಂಕ: 19–09–2008 ವಿಚಾರಣಾಧಿಕಾರಿಗಳ ವಿಚಾರಣಾ ವರದಿ.
6. ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 17–12–2008.
7. ಶ್ರೀ ಮಹಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್‌ರವರ ದಿನಾಂಕ: 05–01–2009ರ ಲಿಖಿತ ಉತ್ತರ.
8. ಸರ್ಕಾರದ ಪತ್ರ ಸಂ: ಆರ್‌ಡಿ 36 ಎಡಿಇ 2007, ದಿನಾಂಕ: 16–05–2009.
9. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ: ಪಿಎಸ್‌ಸಿ–49–ಸಿಎನ್‌ಎಸ್ 09, ದಿನಾಂಕ:17–06–2009.

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಸೈಫುಲ್ಲಾ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಬ್ಯಾಡಗಿ ತಾಲ್ಲೂಕು ಇವರು ಬ್ಯಾಡಗಿ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಸರ್ಕಾರದ ಸುತ್ತೋಲೆ ಸಂ: ಭೂದಾಗ 78/2002–03, ದಿನಾಂಕ:25–07–2003ರ ಆದೇಶದಂತೆ ಕೆಳ ನ್ಯಾಯಾಲಯಗಳ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು 60 ದಿವಸಗಳ ಕಾಲಾವಕಾಶ ಇದ್ದು, ಈ ಅವಧಿ ಮುಗಿಯುವವರೆಗೆ ಕೆಳ ನ್ಯಾಯಾಲಯದ ಆದೇಶಗಳನ್ನು ಜಾರಿಗೊಳಿಸಬಾರದೆಂದು ಸುತ್ತೋಲೆಯಲ್ಲಿ ಸ್ಪಷ್ಟಪಡಿಸಿದ್ದರೂ 60 ದಿವಸಗಳವರೆಗೆ ಕಾಯದೇ, ಬ್ಯಾಡಗಿ ತಾಲ್ಲೂಕು, ಕಾಡೇನಹಳ್ಳಿ ಗ್ರಾಮದ ರಿ.ಸ.ನಂ. 54/2ರ ಕ್ಷೇತ್ರ 05–00 ಎಕರೆ ಜಮೀನಿನ ಖಾತೆ ಬದಲಾವಣೆ ಮಾಡಿರುವ ಬಗ್ಗೆ ಅಪರಾಧ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ 1966ರ ನಿಯಮ 3ರ ಉಪನಿಭಂದನೆಗಳನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪದ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ.(1)ರಲ್ಲಿ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅದರಂತೆ ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್‌ರವರು ವಿರುದ್ಧ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1 ರಿಂದ 4 ರವರೆಗೆ) ಮೇಲೆ ಓದಲಾದ ಕ್ರ.ಸಂ.(2)ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ, ಆ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(3) ರಲ್ಲಿ ಶ್ರೀ ಮಹಮ್ಮದ್ ಸೈಫುಲ್ಲಾ ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ, ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ: 29–07–2008ರ ಆದೇಶದಲ್ಲಿ ಶ್ರೀ ಜೆ.ಸಿ.ಗುಡ್ಡಾಕಾರ್, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಇವರ ಕೇಂದ್ರ ಸ್ಥಾನಿಕ ಸಹಾಯಕರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ದಿನಾಂಕ: 19–09–2008ರಲ್ಲಿ ಈ ಪ್ರಕರಣದ ಕುರಿತು ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯಿಸಿ ವರದಿ ನೀಡಿರುತ್ತಾರೆ.

**'ದೋಷಾರೋಪಿತ ನಿವೃತ್ತ ಸರ್ಕಾರಿ ನೌಕರರು ತಮ್ಮ ಸೇವಾವಧಿಯಲ್ಲಿ ಸರ್ಕಾರಿ ಸುತ್ತೋಲೆಗಳು, ಕಾನೂನು ಮತ್ತು ನಿಯಮಗಳು ಜಾರಿಯಲ್ಲಿದ್ದರೂ ಸಹ ಅವುಗಳನ್ನು ಗಣನೆಗೆ ತೆಗೆದುಕೊಳ್ಳದೇ ತಮಗೆ ಅವುಗಳ ಬಗ್ಗೆ ತಿಳುವಳಿಕೆ ಇರಲಿಲ್ಲ ಮತ್ತು ಸಂಬಂಧಪಟ್ಟ ಕೆಳ ದರ್ಜೆಯ ಸರ್ಕಾರಿ ನೌಕರರು ಸುತ್ತೋಲೆ ಮತ್ತು ಕಾನೂನುಗಳ ಮತ್ತು ನ್ಯಾಯಾಲಯಗಳ ಆದೇಶಗಳನ್ನು ಪಾಲನೆ ಮಾಡಬೇಕಾಗುತ್ತದೆ. ತಮ್ಮದು ಯಾವುದೇ ರೀತಿಯಿಂದ ಕರ್ತವ್ಯಲೋಪವಾಗಿಲ್ಲ ಅನ್ನುವ ಸಂಗತಿಯನ್ನು ಒಪ್ಪಿಕೊಳ್ಳಲು ಬರುವುದಿಲ್ಲ. ದೋಷಾರೋಪಿತ ಸರ್ಕಾರಿ ನೌಕರರು ತಮ್ಮ ಕರ್ತವ್ಯಗಳನ್ನು ಬದಿಗಿಟ್ಟು ತಮ್ಮ ಕೆಳ ವರ್ಗದ ಸಿಬ್ಬಂದಿಯವರ ಮೇಲೆ ಆರೋಪಣೆ ಮಾಡುವುದು ಅಷ್ಟೊಂದು ಸಮಂಜಸವು ಮತ್ತು ತೃಪ್ತಿಕರವು ಆಗಿರುವುದಿಲ್ಲ. ಇಲಾಖಾ ಪ್ರಕರಣಗಳಲ್ಲಿ ಸಂಬಂಧಪಟ್ಟ ಸೇವಾ ನಿಯಮಗಳು ನ್ಯಾಯದಾನ ದೃಷ್ಟಿ ಮತ್ತು ನೈಸರ್ಗಿಕ ನಿಯಮಗಳ ಪಾಲನೆಯನ್ನು ಮಾಡಿ ಈ ಮೇಲಿನ ಎಲ್ಲಾ ಸಂಗತಿಗಳನ್ನು**

**ಗಣನೆಗೆ ತೆಗೆದುಕೊಂಡು ಆಪಾದಿತ ಮೇಲೆ ಹೊರಿಸಿದ ಆಪಾದನೆಗಳನ್ನು ರುಜುವಾತುಪಡಿಸಲಾಗಿದೆ' ಎಂದು ತಿಳಿಸಿದ್ದಾರೆ.** ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ, ಶ್ರೀ ಮಹಮ್ಮದ್ ಸೈಫುಲ್ಲಾ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಶ್ರೀಯುತರಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ ಕ್ರ.ಸಂ.(6)ರಲ್ಲಿ ಜಾರಿ ಮಾಡಲಾಗಿದೆ. ಅದರಂತೆ, ಕ್ರ.ಸಂ.(7)ರಲ್ಲಿ ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ **'ನಾನು ಯಾವುದೇ ನಿಯಮವನ್ನು ಉದ್ದೇಶಪೂರ್ವಕವಾಗಿ ಉಲ್ಲಂಘನೆ ಮಾಡಿರುವುದಿಲ್ಲವೆಂದು ತಿಳಿಸುತ್ತಾ, ಆಪಾದನೆಯಿಂದ ಮುಕ್ತಗೊಳಿಸಬೇಕಾಗಿ ಕೋರಿರುತ್ತಾರೆ'.**

ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ, ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಲ್ಲಿ ಶೇಕಡ 10ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ತೀರ್ಮಾನಿಸಲಾಗಿದೆ. ಮೇಲೆ ಓದಲಾದ ಕ್ರ.ಸಂ.(8)ರಲ್ಲಿ ದಿನಾಂಕ: 16–05–2009ರ ಪತ್ರದಲ್ಲಿ ದಂಡನೆ ವಿಧಿಸುವ ಪೂರ್ವದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯಲು ಕೋರಲಾಗಿತ್ತು. ಅದರಂತೆ, ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಇವರಿಗೆ ನಿವೃತ್ತಿ ವೇತನದ ಶೇಕಡಾ 10ರಷ್ಟರ ಬದಲು ಶೇಕಡಾ 5 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ಮೇಲೆ ಓದಲಾದ ಕ್ರ.ಸಂ.(9)ರಲ್ಲಿ ಸಹಮತಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಇವರಿಗೆ ಲೋಕಸೇವಾ ಆಯೋಗವು ನೀಡಿದ ಸಹಮತಿಯ ಹಿನ್ನೆಲೆಯಲ್ಲಿ ಇವರ ನಿವೃತ್ತಿ ವೇತನದಿಂದ ಶೇಕಡ 5 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 36 ಎಡಿಇ 2007, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್, ಬ್ಯಾಡಗಿ ಇವರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ **214(1)(ಎ)**ರನ್ವಯ ಇವರ ನಿವೃತ್ತಿ ವೇತನದ ಶೇಕಡ 5 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2300

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಆರ್‌ಡಿ 69 ಎಡಿಇ 2004, ದಿನಾಂಕ: 13–11–2008.
2. ಶ್ರೀ ಎಸ್.ಜಿ.ಪಲ್ಲೇದ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ಅಧ್ಯಕ್ಷರು ಜಿಲ್ಲಾ ಗ್ರಾಹಕರ ವೇದಿಕೆ, ಗದಗ್ ಇವರ ಮನವಿ ದಿನಾಂಕ: 23–05–2009

**ಪ್ರಸ್ತಾವನೆ:**

ಶ್ರೀ ಟಿ.ಎಲ್. ನಾಯಕ್, ನಿವೃತ್ತ ತಹಶೀಲ್ದಾರ್ ಇವರು ಈ ಹಿಂದೆ ಮುಂಡರಗಿ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮುಂಡರಗಿ ತಾಲ್ಲೂಕಿನ ಗಂಗಾಪುರ ಗೋಶಾಲೆಯ ನಿರ್ವಹಣೆಯಲ್ಲಿ ಹಾಗೂ ಗೋಶಾಲೆಗೆ ಮೇವು ಖರೀದಿ ಮಾಡಿರುವ ವ್ಯವಹಾರದಲ್ಲಿ ಅವ್ಯವಹಾರ ಮಾಡಿ ಹಣ ದುರುಪಯೋಗ ಹಾಗೂ ಕರ್ತವ್ಯ ಲೋಪ ಎಸಗಿರುವ ಕುರಿತು ಶ್ರೀ ಟಿ.ಎಲ್. ನಾಯಕ, ನಿವೃತ್ತ ತಹಶೀಲ್ದಾರ್ ಇವರ ಮೇಲೆ, ಮೇಲೆ ಓದಲಾದ ಕ್ರ.ಸಂ.(1)ರಲ್ಲಿ ದಿನಾಂಕ:13.11.2008ರ ಆದೇಶದಲ್ಲಿ ಶ್ರೀ ಎಸ್.ಜಿ.ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ ಗದಗ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಆದರೆ ಮೇಲೆ ಓದಲಾದ ಕ್ರ.ಸಂ.(2)ರಲ್ಲಿ ಶ್ರೀ ಎಸ್.ಜಿ.ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಯವರು ದಿನಾಂಕ: 23–05–2009ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಆಪಾದಿತ ಶ್ರೀ ಟಿ.ಎಲ್. ನಾಯಕ್, ನಿವೃತ್ತ ತಹಶೀಲ್ದಾರ್, ಮುಂಡರಗಿ ಇವರು ಪರಿಚಯದವರಾಗಿರುವುದರಿಂದ ನ್ಯಾಯದ ದೃಷ್ಟಿಯಿಂದ ಇಲಾಖಾ ವಿಚಾರಣೆಯನ್ನು ತಮಗೆ ಮುಂದುವರೆಸಲು ಇಚ್ಛೆ ಇರುವುದಿಲ್ಲವೆಂದು ಹಾಗೂ ಬೇರೆ ವಿಚಾರಣಾ ಅಧಿಕಾರಿಯನ್ನು ನೇಮಕ ಮಾಡುವಂತೆ ಕೋರಿದ್ದಾರೆ. ಆದ್ದರಿಂದ ವಿಚಾರಣಾಧಿಕಾರಿ ಬದಲಾವಣೆ ಕೋರಿಕೆಯನ್ನು ಸರ್ಕಾರವು ಪರಿಗಣಿಸಿ ಶ್ರೀ ಫ.ನೀ.ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಮುಂಡರಗಿ ತಹಶೀಲ್ದಾರ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 69 ಎಡಿಇ 2004, ಬೆಂಗಳೂರು, ದಿನಾಂಕ: 25ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಫ.ನೀ.ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್ ಮುಂಡರಗಿ ತಾಲ್ಲೂಕು, ಗದಗ್ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಉಳಿದ ಅಂಶಗಳು ಸರ್ಕಾರದ ಆದೇಶ ಸಂ: ಆರ್‌ಡಿ 69 ಎಡಿಇ 2004, ದಿನಾಂಕ: 13–11–2008ರಲ್ಲಿರುವಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2301

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ಮೈಸೂರು ಕಾಗದ ಕಾರ್ಖಾನೆಯವರು ವನ್ಯಜೀವಿ ವಿಭಾಗ ಪ್ರದೇಶದಲ್ಲಿ ಬೆಳೆದ ನೆಡುತೋಪಿಗೆ ಪರಿಹಾರವಾಗಿ ಗುತ್ತಿಗೆ ಬಾಡಿಗೆಯನ್ನು ವಿನಾಯಿತಿ ನೀಡುವ ಕುರಿತು ಪರಿಶೀಲಿಸಲು ರಚಿಸಿರುವ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಪಜೀ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ದಿನಾಂಕ: 02–04–2009 ನಡವಳಿ ಬಗ್ಗೆ.
2. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರ ಪತ್ರದ ಸಂಖ್ಯೆ:ಬಿ/ವಜೀ/ಸಿಆರ್–95/1994–95 ದಿನಾಂಕ: 03–07–2009 ಮತ್ತು 24–07–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಪಜೀ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ದಿನಾಂಕ: 02–04–2009ರ ನಡವಳಿಯಲ್ಲಿ ಮೆ: ಮೈಸೂರು ಕಾಗದ ಕಾರ್ಖಾನೆಯವರು ವನ್ಯಜೀವಿ ವಿಭಾಗ ಪ್ರದೇಶದಲ್ಲಿ ಬೆಳೆದ ನೆಡುತೋಪಿಗೆ ಪರಿಹಾರವಾಗಿ ಗುತ್ತಿಗೆ ಬಾಡಿಗೆಯನ್ನು ವಿನಾಯಿತಿ ನೀಡುವ ಕುರಿತು ಪರಿಶೀಲಿಸಲು ಒಂದು ಸಮಿತಿಯನ್ನು ರಚಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರು ಹಿಂದೆ ನೇಮಿಸಲಾಗಿದ್ದ ಸಮಿತಿಯ ಕೆಲವು ಅಧಿಕಾರಿಗಳು ವರ್ಗಾವಣೆಯಾಗಿರುವುದರಿಂದ ಹಾಗೂ ಇತರೇ ಕಾರಣಗಳಿಂದ ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಸಮಿತಿಯನ್ನು ಪುನರ್ ರಚಿಸಲು ಸರ್ಕಾರವನ್ನು ಕೋರಿರುತ್ತಾರೆ.

| | |
|---|---|
| 1. | ಶ್ರೀ ಜಿ.ಸೆಲ್ವಕುಮಾರ್, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) – ಅಧ್ಯಕ್ಷರು |
| 2. | ಶ್ರೀ ಬಿ.ಬಿ.ನಾಡಗೌಡರ್, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) |
| 3. | ಶ್ರೀ ಕೆ.ಎಸ್.ಅರಳಿಕಟ್ಟಿ, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ನಿರ್ದೇಶಕರು,<br>ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್. |
| 4. | ಶ್ರೀ ಎನ್.ಎಂ.ಹುಂಚ್ಯಾಳಿ, ನಿರ್ದೇಶಕರು (ಹಣಕಾಸು),<br>ಮೈಸೂರು ಪೇಪರ್ ಮಿಲ್ಸ್. |
| 5. | ಶ್ರೀಮತಿ ಸ್ಮಿತಾ ಎಸ್.ಬಿಜ್ಜೂರು, ಭಾ.ಅ.ಸೇ.,<br>ಶಿವಮೊಗ್ಗ ವನ್ಯಜೀವಿ ವಿಭಾಗ, ಶಿವಮೊಗ್ಗ. |
| 6. | ಶ್ರೀ ಪ್ರಕಾಶ್ ನೆಟಾಲ್ಕರ್, ಭಾ.ಅ.ಸೇ.,<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ. |

ಆದ್ದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 54 ಎಫ್‌ಡಬ್ಲ್ಯೂಎಲ್ 2006, ಬೆಂಗಳೂರು. ದಿನಾಂಕ: 24ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೆ: ಮೈಸೂರು ಕಾಗದ ಕಾರ್ಖಾನೆಯವರು ವನ್ಯಜೀವಿ ವಿಭಾಗ ಪ್ರದೇಶದಲ್ಲಿ ಬೆಳೆದ ನೆಡುತೋಪಿಗೆ ಪರಿಹಾರವಾಗಿ ಗುತ್ತಿಗೆ ಬಾಡಿಗೆಯನ್ನು ವಿನಾಯಿತಿ ನೀಡುವ ಕುರಿತು ಪರಿಶೀಲಿಸಲು ರಚಿಸಿರುವ ಸಮಿತಿಯನ್ನು ಈ ಕೆಳಕಂಡಂತೆ ಅಧಿಕಾರಿಗಳನ್ನು ಒಳಗೊಂಡಂತೆ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | |
|---|---|
| 1. | ಶ್ರೀ ಜಿ.ಸೆಲ್ವಕುಮಾರ್, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) – ಅಧ್ಯಕ್ಷರು |
| 2. | ಶ್ರೀ ಬಿ.ಬಿ.ನಾಡಗೌಡರ್, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) |
| 3. | ಶ್ರೀ ಕೆ.ಎಸ್.ಅರಳಿಕಟ್ಟಿ, ಭಾ.ಅ.ಸೇ.,<br>ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ನಿರ್ದೇಶಕರು,<br>ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್. |
| 4. | ಶ್ರೀ ಎನ್.ಎಂ.ಹುಂಚ್ಯಾಳಿ, ನಿರ್ದೇಶಕರು (ಹಣಕಾಸು),<br>ಮೈಸೂರು ಪೇಪರ್ ಮಿಲ್ಸ್. |
| 5. | ಶ್ರೀಮತಿ ಸ್ಮಿತಾ ಎಸ್.ಬಿಜ್ಜೂರು, ಭಾ.ಅ.ಸೇ.,<br>ಶಿವಮೊಗ್ಗ ವನ್ಯಜೀವಿ ವಿಭಾಗ, ಶಿವಮೊಗ್ಗ. |
| 6. | ಶ್ರೀ ಪ್ರಕಾಶ್ ನೆಟಾಲ್ಕರ್, ಭಾ.ಅ.ಸೇ.,<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ. |

ಸದರಿ ಸಮಿತಿಯು ತ್ವರಿತವಾಗಿ ಮೇಲ್ಕಂಡ ವಿಷಯವನ್ನು ಪರಿಶೀಲಿಸಿ ಸರ್ಕಾರಕ್ಕೆ ಒಂದು ತಿಂಗಳ ಒಳಗೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. ಕಲಾವತಿ**

ಪಿ.ಆರ್. 2302 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹುಡ್ಕೋದಿಂದ ಪಡೆದ ಸಾಲಕ್ಕೆ 2009ರ ಸೆಪ್ಟೆಂಬರ್ ತಿಂಗಳಿಗೆ ತ್ರೈಮಾಸಿಕ ಅಸಲು ಮತ್ತು ಬಡ್ಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ. ಕೆಆರ್‌ಡಿಸಿಎಲ್/ಎಂ.ಡಿ./2009–10/1544 ದಿನಾಂಕ: 16–09–2009.

**ಪ್ರಸ್ತಾವನೆ:**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಳ್ಳುತ್ತಿರುವ ಯೋಜನೆಗಳಿಗಾಗಿ ವಿವಿಧ ಸ್ಕೀಂಗಳ ಅಡಿಯಲ್ಲಿ ಹುಡ್ಕೋದಿಂದ ಪಡೆದ ಸಾಲವು ಈವರೆಗೆ ಒಟ್ಟು 4,47,75,05,116/–ರೂ.ಗಳು ದಿನಾಂಕ: 30–09–2009ರ ಅಂತ್ಯಕ್ಕೆ ಬಾಕಿ ಇರುತ್ತದೆ. ಓದಲಾದ ದಿನಾಂಕ 16–09–2009ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, 2009ನೇ ಸೆಪ್ಟೆಂಬರ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಮೇಲಿನ ಸಾಲದ ಮರುಪಾವತಿಗೆ ಅಸಲು ಹಾಗೂ ಬಡ್ಡಿ ಅನುಕ್ರಮವಾಗಿ 14,14,99,000/– ರೂ.ಗಳು ಮತ್ತು 9,32,79,173/– ರೂ.ಗಳು ಒಟ್ಟು ಮೊತ್ತ 23,47,11,505/– ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದೆಯೆಂದು ವರದಿ ಮಾಡಲಾಗಿದೆ. ಈಗ ಬಾಕಿ ಇರುವ ಮೊತ್ತ 23,47,11,505/– ರೂ.ಗಳನ್ನು ಬಿಡುಗಡೆ ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 11 ಇಎಪಿ 2009 ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2009**

ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬತ್ತಿಗೆ 2009ನೇ ಸೆಪ್ಟೆಂಬರ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಹಾಗೂ ಬಡ್ಡಿ ಸೇರಿ ಒಟ್ಟು 23,47,11,505/–ರೂ. ಗಳನ್ನು (ಇಪ್ಪತ್ತ ಮೂರು ಕೋಟಿ ನಲವತ್ತೇಳು ಲಕ್ಷದ ಹನ್ನೊಂದು ಸಾವಿರದ ಐದುನೂರ ಐದು ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ" ರ ಅಡಿಯಲ್ಲಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಸದರಿ ಬಿಲ್ಲಿನ ಮೊತ್ತಕ್ಕೆ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 780 ಆಕೋ–1/90 ದಿನಾಂಕ 26–09–2009 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 2306

**ವಿಷಯ:** 2009–10ನೇ ಸಾಲಿನಲ್ಲಿ ಪ್ರಧಾನ ಲೆಕ್ಕಶೀರ್ಷಿಕೆ 5054 ರ ಅಡಿಯಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ. ಲೋಇ 59 ಇಎಪಿ 2008 ಬೆಂಗಳೂರು, ದಿನಾಂಕ: 22–06–2009 ಮತ್ತು 18–08–2009.

**ಪ್ರಸ್ತಾವನೆ:**

2009–10ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಅಡಿಯಲ್ಲಿ ಬಂಡವಾಳ ಕಾಮಗಾರಿಗಳಿಗಾಗಿ ರೂ.225.00 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 5054–80–190–0–01–133 (ಯೋಜನೆ) ಅಡಿಯಲ್ಲಿ ವಿಶೇಷ ಅಭಿವೃದ್ಧಿ ಯೋಜನೆಗಾಗಿ ರೂ.100.00 ಕೋಟಿಗಳನ್ನು ಒದಗಿಸಲಾಗಿದ್ದು ಒಟ್ಟು ರೂ.325.00 ಕೋಟಿಗಳ ಅನುದಾನ ಒದಗಿಸಲಾಗಿದೆ. ಆದರೆ ವಿಶೇಷ ಅಭಿವೃದ್ಧಿ ಯೋಜನೆಗಾಗಿ ಒದಗಿಸಿದ್ದ 100 ಕೋಟಿ ರೂ.ಗಳನ್ನು ಹಿಂಪಡೆಯಲಾಗಿದ್ದು ಒಟ್ಟು 225 ಕೋಟಿ ರೂ.ಗಳನ್ನು ಮೇಲಿನ ಲೆಕ್ಕ ಶೀರ್ಷಿಕೆಯಡಿಯಲ್ಲಿ ಅನುದಾನವಾಗಿ ಒದಗಿಸಲಾಗಿದೆ.

ಓದಲಾದ (1)ರ ದಿನಾಂಕ 22–06–2009ರ ಮತ್ತು 18–08–2009 ರ ಸರ್ಕಾರಿ ಆದೇಶಗಳಲ್ಲಿ ಅನುಕ್ರಮವಾಗಿ 51.55 ಕೋಟಿ ರೂ.ಗಳು ಮತ್ತು 56.25 ಕೋಟಿ ರೂ.ಗಳನ್ನು ನಿಗಮಕ್ಕೆ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರು ಚಾಲ್ತಿಯಲ್ಲಿರುವ ಕಾಮಗಾರಿಗಳ ಬಾಕಿ ಇರುವ ಬೃಹತ್ ಮೊತ್ತದ ಬಿಲ್ಲುಗಳನ್ನು ಪಾವತಿಸಲು 82.50 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 59 ಇಎಪಿ 2008, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2009**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 2009–10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಇದರ ಅಡಿಯಲ್ಲಿ ಬಂಡವಾಳ ವೆಚ್ಚಕ್ಕಾಗಿ 82.50 ಕೋಟಿ ರೂ.ಗಳನ್ನು (ಎಂಬತ್ತೆರಡು ಕೋಟಿ ಐವತ್ತು ಲಕ್ಷ ರೂಪಾಯಿಗಳನ್ನು ಮಾತ್ರ) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು, 82.50 ಕೋಟಿ ರೂ.ಗಳನ್ನು (ಎಂಬತ್ತೆರಡು ಕೋಟಿ ಐವತ್ತು ಲಕ್ಷ ರೂಪಾಯಿಗಳನ್ನು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ.17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ. ಲೋಇ 726 ಎಫ್‌ಸಿ–1/09 ದಿನಾಂಕ:23.09.2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 2307

## ಸಹಕಾರ ಸಚಿವಾಲಯ

**ವಿಷಯ:** ಕೆ.ಸಿ.ಸಿ ಬ್ಯಾಂಕ್ ನಿ, ಧಾರವಾಡ ಇದರ ಅವ್ಯವಹಾರಗಳ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 10 ಸಿಎಲ್ಎಂ 2009 ದಿನಾಂಕ: 19–02–2009.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ ಸಿಎಬಿ–1/ 33/ 2005–06 ದಿನಾಂಕ: 27–07–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕೆ.ಸಿ.ಸಿ ಬ್ಯಾಂಕ್ ನಿ, ಧಾರವಾಡ ಇದರ ಅವ್ಯವಹಾರಗಳ ವಿಚಾರಣೆ ಅವಧಿಯನ್ನು ದಿನಾಂಕ: 31–03–2009 ರವರೆಗೆ ಕಾಲಾವಕಾಶವನ್ನು ವಿಸ್ತರಿಸಿ ಆದೇಶವನ್ನು ಹೊರಡಿಸಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸದರಿ ಬ್ಯಾಂಕಿನ ಅವ್ಯವಹಾರಗಳ ಮತ್ತು ನಷ್ಟಗಳ ಬಗ್ಗೆ ಸತ್ಯಾಂಶವನ್ನು ಪತ್ತೆ ಮಾಡಲು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಜಂಟಿ ನಿರ್ದೇಶಕರಾದ ಶ್ರೀ ರತ್ನಾನಾಯಕ್ ಅವರು ವಿಚಾರಣೆಯನ್ನು ನಡೆಸಿ ದಿನಾಂಕ: 22–05–2009 ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದು ವಿಚಾರಣಾ ವರದಿಯು ಅಪೂರ್ಣವಾಗಿರುವುದರಿಂದ ನಿಖರವಾದ ಹಾಗೂ ಸ್ಪಷ್ಟವಾದ ವರದಿಯನ್ನು ಸಲ್ಲಿಸಲು ವಿಚಾರಣಾ ವರದಿಯನ್ನು ಹಿಂದಿರುಗಿಸಲಾಗಿರುತ್ತದೆಂದೂ ವಿಚಾರಣಾಧಿಕಾರಿಯವರು ವಿಚಾರಣಾ ಅವಧಿಯಲ್ಲಿ ಕೆ.ಸಿ.ಸಿ. ಬ್ಯಾಂಕಿನಲ್ಲಿ ಆಡಳಿತಗಾರ/ ವ್ಯವಸ್ಥಾಪಕ ನಿರ್ದೇಶಕರಾಗಿ ಕೆಲಸ ಮಾಡಿದಂತಹ ಇಲಾಖಾಧಿಕಾರಿಗೆ ಆಡಳಿತ ಮಂಡಳಿ ಸದಸ್ಯರಿಗೆ ಹಾಗೂ ಬ್ಯಾಂಕಿನ ಅಧಿಕಾರಿ ವರ್ಗದವರಿಗೆ ತಿಳುವಳಿಕೆ ಪತ್ರ ಜಾರಿ ಮಾಡಿ ಅವರುಗಳಿಂದ ಹೇಳಿಕೆ ಪಡೆಯಲು ಕನಿಷ್ಠ ಪಕ್ಷ 20 ದಿನಗಳ ಕಾಲಾವಕಾಶ ಬೇಕಾಗಿರುತ್ತದೆಂದೂ ಇನ್ನುಳಿದ ಅಂಶಗಳನ್ನು ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಬೇಕೆಂದೂ ಕೋರಿರುವುದರಿಂದ ವಿಚಾರಣಾ ವರದಿಯನ್ನು ಸಲ್ಲಿಸಲು ಕಾಲಾವಕಾಶ ನೀಡಿ ಆದೇಶ ಹೊರಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 10 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2009**.

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕೆ.ಸಿ.ಸಿ ಬ್ಯಾಂಕ್ ನಿ, ಧಾರವಾಡ ಇದರ ಪ್ರಕರಣ 64ರಡಿ ಆದೇಶಿಸಿರುವ ವಿಚಾರಣೆಯ ಅವಧಿಯನ್ನು ದಿನಾಂಕ: 01–04–2009 ರಿಂದ ದಿನಾಂಕ: 30–09–2009 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 64(2–3)ಗೆ ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೆ.ಸಿ.ಸಿ ಬ್ಯಾಂಕ್ ನಿ, ಧಾರವಾಡ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 64 ಉಪಪ್ರಕರಣ (2–ಎ) ರಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಮೂವತ್ತೆಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 64 ಉಪ–ಪ್ರಕರಣ (2–ಎ) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 01–10–2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64 ಉಪ–ಪ್ರಕರಣ (2–ಎ)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್.ಹುಚ್ಚಾಚಾರಿ**

ಪಿ.ಆರ್. 2309

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ದಿನಾಂಕ: 31–03–2009 ರೊಳಗೆ ನಡೆಸಬೇಕಾಗಿರುವ ಕೆ.ಎಸ್.ಎಫ್.ಸಿ ಉದ್ಯೋಗಿಗಳ ಗೃಹ ನಿರ್ಮಾಣ ಸಹಕಾರ ಸಂಘ ನಿ, ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್ಎಂ 2009, ದಿನಾಂಕ: 04–03–2009.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್ಎಂ 2009, ದಿನಾಂಕ: 13–05–2009.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಹೆಚ್ಎಸ್ಜಿ:2:122:ಹೆಚ್ಹೆಚ್ಎಸ್:2009–10 ದಿನಾಂಕ: 21–08–2009.

**ಪ್ರಸ್ತಾವನೆ:**

ಮೇಲೆ ಓದಲಾದ (2) ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್ಎಂ 2009, ದಿನಾಂಕ:04–03–2009ರ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ 2009–10ರಿಂದ ಐದು

ವರ್ಷದ ಅವಧಿಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳಿಗೆ ಚುನಾವಣೆಯನ್ನು ನಡೆಸತಕ್ಕದ್ದೆಂದು ಆದರೆ, ದಿನಾಂಕ:04–03–2009ಕ್ಕೆ ಹಿಂದೆ ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ್ದು ಚುನಾವಣೆಯು ಮುಕ್ತಾಯವಾಗದಿದ್ದ ಸಂದರ್ಭಗಳಲ್ಲಿ ಮಾತ್ರ ದಿನಾಂಕ:04–03–2009 ರಲ್ಲಿದ್ದಂತೆ ಚುನಾವಣಾ ವೇಳಾ ಪಟ್ಟಿಯ ಯಾವ ಹಂತದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ನಿಲ್ಲಿಸಲಾಗಿತ್ತೋ ಆ ಹಂತದಿಂದ ಚುನಾವಣಾ ಪ್ರಕ್ರಿಯೆಯನ್ನು ಮುಂದುವರಿಸಿ ದಿನಾಂಕ:04.03.2009ರ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ ಚುನಾವಣೆಯನ್ನು ಮುಕ್ತಾಯಗೊಳಿಸತಕ್ಕದ್ದೆಂದು ಆದೇಶಿಸಿರುತ್ತದೆ. ಕೆ.ಎಸ್.ಎಫ್.ಸಿ ಉದ್ಯೋಗಿಗಳ ಗೃಹ ನಿರ್ಮಾಣ ಸಹಕಾರ ಸಂಘ ನಿ, ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯು 2005ನೇ ಸೆಪ್ಟೆಂಬರ್ ಮಾಹೆಯಲ್ಲಿ ಜರುಗಿದ್ದರಿಂದ ಐದು ವರ್ಷಗಳ ಅಧಿಕಾರಾವಧಿಯು ಸೆಪ್ಟೆಂಬರ್ 2009ರವರೆಗೆ ಇರುತ್ತದೆ ಎಂಬ ತಪ್ಪು ತಿಳುವಳಿಕೆಯ ಪರಿಣಾಮವಾಗಿ ಇದರ ಆಡಳಿತ ಮಂಡಳಿಗೆ 2009–10ರಿಂದ 2013–14ನೇ ಸಾಲಿಗೆ ನಡೆಸಬೇಕಾದ ಚುನಾವಣೆಯನ್ನು ನಿಗದಿಪಡಿಸಿದ ದಿನಾಂಕದಂದು ನಡೆಸಿರುವುದಿಲ್ಲವೆಂದು ಸಂಘವು ತಿಳಿಸಿರುತ್ತದೆಂದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ಪ್ರಕರಣ 28–ಎ(4), ಎ(5), 28–ಬಿ, 39–ಎ ಹಾಗೂ ಕರ್ನಾಟಕ ಸಂಘಗಳ ಅಧಿನಿಯಮ 1960ರ ನಿಯಮ 14ಕ್ಕೆ ವಿನಾಯ್ತಿಗೊಳಿಸಿ ಆದೇಶ ಹೊರಡಿಸಲು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 170 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2009.**

ಮೇಲಿನ ಪರಿಸ್ಥಿತಿಯಲ್ಲಿ ಕೆ.ಎಸ್.ಎಫ್.ಸಿ ಉದ್ಯೋಗಿಗಳ ಗೃಹ ನಿರ್ಮಾಣ ಸಹಕಾರ ಸಂಘ ನಿ, ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಒ 47 ಸಿಎಲ್‌ಎಂ 2009, ದಿನಾಂಕ: 04–03–2009 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು 31–10–2009ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–10–2009 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 2310

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 183 ಸೇಇಮು 2009, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಶ್ರೀ ಸಿ.ವಿ. ಪಾಟೀಲ್, ಮುಖ್ಯ ಇಂಜಿನಿಯರ್, ನೇಮಕಾತಿ ನಿರೀಕ್ಷಣೆಯಲ್ಲಿ ಇವರನ್ನು ಮುಖ್ಯ ಇಂಜಿನಿಯರ್, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು ಇಲ್ಲಿಗೆ ಶ್ರೀ ಜಗನ್ನಾಥ್ ರೆಡ್ಡಿ, ಮುಖ್ಯ ಇಂಜಿನಿಯರ್ ಇವರ ಸ್ಥಾನದಲ್ಲಿ ನೇಮಿಸುವ ಸಲುವಾಗಿ ಅವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 2476

## ENERGY SECRETARIAT

**Sub :** Constitution of Selection Committee to recommend the panel of names for selection of Chairperson, KERC.

**Read :** Letter No:E/06/4/7119 dated 11.9.2009 of the Secretary, KERC, Bangalore

**PREAMBLE:**

1. The Karnataka Electricity Regulatory Commission (KERC) constituted as per Section -3 of Karnataka Electricity Reform Act, 1999 consists of three members including the Chairperson.

2. In the letter read above, Secretary, KERC, had reported the following;

(a) Sri K.P. Pandey will be completing his tenure of five years as Chairman, KERC on the afternoon of 14.12.2009,

(b) consequently the occurrence of the vacancy of the post of Chairman, KERC w.e.f. 15.12.2009

(3) As per Sub-section (1) of Section 85 of the Electricity Act 2003, the Government shall for the purposes of selecting the Member /Chairperson of the State Electricity Regulatory Commission, constitute a Selection Committee. Hence this Order.

**Government Order No:EN 68 PSR 2009 , Bangalore, Dated:21st October, 2009**

In terms of Sub-section (1) of Section 85 of the Elecrticity Act, 2003, the Government of Karnataka hereby constitute the Selection Committee comprising of the following persons as Chairman and Members, for selecting and recommending the panel of names for appointment as Chairperson Karnataka Electricity Regulatory Commission.

| | | |
|---|---|---|
| 1) | Justice Sri S.R. Venkatesha Murthy<br>Retired Judge of High Court of Karnataka | Chairman |
| 2) | Chief Secretary to Govt. of Karnataka Bangalore | Member |
| 3) | Chairman, Central Electricity Authority | Member |

The Principal Secretary to Government of Karnataka, Energy Department, Bangalore will act as the Convener of the Selection Committee.

The Selection Committee shall:

(a) in terms of Section 84 (1) of the Electricity Act 2003, finalize the selection of panel of names for appointment as Chairperson, KERC as expeditiously as possible and within 45 days from the date of this order.

(b) recommend a panel of names to the Government for filling the post of Chairperson, KERC,

(c) before recommending any person for appointment as Chairperson of KERC shall satisfy itself, that such person does not have any financial or other interest which is likely to affect prejudicially his/her functions as a Chairperson of the Commission, in terms of sub-section (5) of Section 85 of the Electricity Act, 2003.

this order shall come into force with immediate effect.

By Order and in the Name of the Governor of Karnataka,

P.R. 2464

**S.J. SAMPATH KUMAR**

Under Secretary to Government

Energy Department

**ಇಂಧನ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಇಎನ್ 4 ಎನ್‌ಸಿಇ 2008, ಬೆಂಗಳೂರು, ದಿನಾಂಕ:23ನೇ ಅಕ್ಟೋಬರ್, 2009**

ಮೆ:ಐ.ಕೆ.ಪಿ. ಕನ್‌ಸ್ಟ್ರಕ್ಷನ್ ಇವರಿಗೆ ಹಂಚಿಕೆ ಮಾಡಲಾದ 8.5. ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ:ಇಎನ್ 4 ಎನ್‌ಸಿಇ 2008 ದಿನಾಂಕ:15.7.09 ರ ಪ್ರಸ್ತಾವನೆ ಹಾಗೂ ಆದೇಶ ಭಾಗದಲ್ಲಿ ನಮೂದಿಸಿರುವ "ಚಿತ್ರದುರ್ಗ" ಜಿಲ್ಲೆಯ ಬದಲಿಗೆ "ಚಿಕ್ಕಮಗಳೂರು" ಜಿಲ್ಲೆ ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು ಹಾಗೂ ಸದರಿ ಆದೇಶದಲ್ಲಿ ನಮೂದಿಸಿದ ಕೋಷ್ಟಕದ ಬದಲಾಗಿ ಈ ಕೆಳಗಿನ ಕೋಷ್ಟಕಕ್ಕೆ ಬದಲಾಯಿಸಿಕೊಂಡು ಓದಿಕೊಳ್ಳತಕ್ಕದ್ದು.

| Toposheet No | Proposed capacity in MW | Near by villages of the proposed area and district | Geographical area description of the project |
|---|---|---|---|
| 57C/2 | 8.5.MW | Narasipura,<br>Hullehalli,<br>Sigehadlu,<br>Gaudankattihalli,<br>Kedigere,<br>Chikamagalur district. | Proposed area is a plain terrain and has slope in W-E direction. It has water bodies, coconut plantations and is open scrub type : Further, a district highway runs in N-S direction and the Number of villages and peaks of the area is mentioned accordingly. The proposed area is covered in the following Geographical co-ordinates<br>Latitude:13$^0$ 36'24"-13$^0$40'0" N<br>Longitude :76$^0$0'0"-76$^0$ 3'38" E<br>Ridge peaks: 802, 815, 764, 762, 773, 789, 820 M Amsl |
| Total | 8.5. MW | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ :** ಮೆ॥ ಐ.ಕೆ.ಪಿ. ಕನ್‌ಸ್ಟ್ರಕ್ಷನ್ ಇವರಿಗೆ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ :** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ: ಕೆಆರ್‌ಇಡಿ/08/ಐಕೆಪಿ/2007/2772 ದಿನಾಂಕ: 29.12.2007.

2. ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಐ.ಕೆ.ಪಿ. ಕನ್‌ಸ್ಟ್ರಕ್ಷನ್ ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 8.5. ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ॥ ಐ.ಕೆ.ಪಿ. ಕನ್‌ಸ್ಟ್ರಕ್ಷನ್ ಇವರಿಗೆ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 4 ಎನ್‌ಸಿಇ 2008, ಬೆಂಗಳೂರು, ದಿನಾಂಕ: 15ನೇ ಜುಲೈ, 2009**

ಮೆ :ಐ.ಕೆ.ಪಿ. ಕನ್ಸ್‌ಟ್ರಕ್ಷನ್ ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ.

| Toposheet No. | Proposed capacity in MW | Near by villages of the proposed area and district. | Geographical area description of the project |
|---|---|---|---|
| 57 B/3 | 8.5 MW<br><br>(34X250 KW) | Devaragollarahatti,<br>Haluvadara,<br>Arubugatte,<br>Heggere,<br>Bharamasagara &<br>Bevinahalli<br><br>Chitradurga District | The Identified location is a ground level plain spread across the Pune-Bangalore NH4 and situated on the South of Bharamasagar Town. The proposed location appears to be on the wind shadow zone of the area situated on the West of this location. The area has three peaks and is surrounded by the villages as mentioned in the column (4) Further, it appears to be non-forest and open scrub features and is covered in the following Geographical Co-ordinates;<br>Latitude:$14^0$ 18'23"-$14^0$22'11" N<br>Longitude :$76^0$10''0"-$76^0$ 11'51" E<br>Ridge peaks: 706, 792 & 754m Amsl |
| Total | 8.5.MW | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 1 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.
12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 2465

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕಾತಿ ಮಾಡಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಕಂಇ 37 ಪಿಎಫ್ಎನ್ 1994 ದಿನಾಂಕ:17.9.1996.
2. ಸರ್ಕಾರಿ ಆದೇಶ ಸಂಖ್ಯೆ:ಸಇ 20 ಸಸಂನೋ 2008 ದಿನಾಂಕ:25.9.2008.
3. ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಹಾಗೂ ಉಪ ವಿಭಾಗಾಧಿಕಾರಿಗಳು ತುಮಕೂರು ವಿಭಾಗ, ತುಮಕೂರು ರವರ ಪತ್ರ ಸಂಖ್ಯೆ:ಸಿಇಎಸ್/1/ 2009–10 ದಿನಾಂಕ:5.5.2009.
4. ಸರ್ಕಾರಿ ಆದೇಶ ಸಂಖ್ಯೆ :ಸಇ 20 ಸಸಂನೋ 2008, ದಿನಾಂಕ 15.6.2009.
5. ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ ತುಮಕೂರು ಹಾಗೂ ಉಪ ವಿಭಾಗಾಧಿಕಾರಿಗಳು ತುಮಕೂರು ವಿಭಾಗ, ತುಮಕೂರು ರವರ ಪತ್ರ ಸಂಖ್ಯೆ :ಸಿಇಎಸ್/6/ 2009–10 ದಿನಾಂಕ :5.9.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:17/9/1996 ರ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ:25.9.2008ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:19.9.2008 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತಿ ನೂತನ

ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:5.5.2009ರ ಪತ್ರದಲ್ಲಿ ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ ಊರ್ಡಿಗೆರೆ ರವರು ಸದರ ಸಂಸ್ಥೆಗೆ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:19.9.2008 ರಿಂದ ಆರು ತಿಂಗಳ ಅವಧಿಯವರೆಗೆ ವಿಸ್ತರಿಸಿ ಈ ಅವಧಿಯೊಳಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ. ಪ್ರಸ್ತುತ ಆಡಳಿತಾಧಿಕಾರಿಗಳ ಅವಧಿ ದಿನಾಂಕ: 19.3.2009ಕ್ಕೆ ಮುಕ್ತಾಯವಾಗಿದೆ. ಆಡಳಿತ ಮಂಡಳಿಯ ಎರಡೂ ಗುಂಪುಗಳ ನಡುವೆ ಇದ್ದ ನ್ಯಾಯಾಲಯದ ದಾವೆ ಅಂತಿಮವಾಗಿ ದಿನಾಂಕ:21.3.2009 ರಂದು "In View of the Joint Memo, appeal is dismissed as not pressed for" ಎಂದು ನ್ಯಾಯಾಲಯವು ಆದೇಶಿಸಿದ್ದು ಹಾಗೂ ಈ ಹಿಂದಿನಿಂದಲೂ ಆಡಳಿತಾಧಿಕಾರಿಗಳ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರುತ್ತಿರುವುದರಿಂದ, ವಿದ್ಯಾ ಸಂಸ್ಥೆ, ವಿದ್ಯಾಲಯ, ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:19.3.2009 ರಿಂದ ಮುಂದಿನ ಆರು ತಿಂಗಳವರೆಗೆ ವಿಸ್ತರಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ:15.6.2009ರ ಆದೇಶದಲ್ಲಿ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:19.3.2009ರಿಂದ ಮುಂದಿನ ಆರು ತಿಂಗಳವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ, ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ದಿನಾಂಕ:5.9.2009ರ ಪತ್ರದಲ್ಲಿ ಆಡಳಿತಾಧಿಕಾರಿ, ಸೆಂಟ್ರಲ್ ಏಜುಕೇಷನ್ ಸೊಸೈಟಿ, ಊರ್ಡಿಗೆರೆ, ಉಪ ವಿಭಾಗ, ತುಮಕೂರು ಇವರು ದಿನಾಂಕ:15.6.2009ರ ಸರ್ಕಾರಿ ಆದೇಶವನ್ನು ಉಲ್ಲೇಖಿಸುತ್ತಾ ಸದರಿ ಆದೇಶದಲ್ಲಿ ನೀಡಲಾದ ಅವಧಿಯಲ್ಲಿ ಆಡಳಿತ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವ ಬಗ್ಗೆ ಸದಸ್ಯತ್ವಕ್ಕೆ ಶುಲ್ಕವನ್ನು ಪರಿಷ್ಕರಿಸುವ ಹಾಗೂ ಸಮಿತಿ ಸದಸ್ಯರ ಸಂಖ್ಯೆಯನ್ನು ಮಿತಿಗೊಳಿಸುವ ಬಗ್ಗೆ ಇದರ ಜೊತೆಗೆ ಸದಸ್ಯತ್ವ ಶುಲ್ಕದ ಪರಿಷ್ಕರಣೆ ಕಾರ್ಯಗಳು ಬಾಕಿ ಇದ್ದ ಪ್ರಯುಕ್ತ ನಿಗಧಿತ ಅವಧಿಯಲ್ಲಿ ಚುನಾವಣೆ ನಡೆಸಲಾಗಲಿಲ್ಲ, ಆದ್ದರಿಂದ, ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:19.9.2009ರಿಂದ ಮತ್ತೆ ಆರು ತಿಂಗಳ ಅವಧಿಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಇ 20 ಸಸಂನೋ 2008, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ, ಕಾಯ್ದೆ 1960 ರ ಕಲಂ 27(ಎ)ರ ಪ್ರಕಾರ ಸೆಂಟ್ರಲ್ ಏಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ದಿನಾಂಕ:19.9.2009 ರಿಂದ ಮುಂದಿನ ಆರು ತಿಂಗಳವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2467

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದ ಎಲ್ಲಾ ಆಯುಷ್ ಆಸ್ಪತ್ರೆಗಳಲ್ಲಿ ಹಾಗೂ ಆಯುಷ್ ಚಿಕಿತ್ಸಾಲಯಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಆಕುಕ 319 ಸಿಜಿಇ 2006, ದಿನಾಂಕ:18–01–2007.
2. ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಏಕ ಕಡತ ಸಂಖ್ಯೆ: ಆಯುಷ್/03/ಐಇಸಿ (3)/2009–10 ಮತ್ತು ಪತ್ರ ಸಂಖ್ಯೆ:ಆಯುಷ್/11/ಐಇಸಿ(3)/2009–10, ದಿನಾಂಕ:13–04–2009, 07–07–2009, ಪತ್ರ ಸಂಖ್ಯೆ:ಆಯುಷ್/16/ಐಇಸಿ(3)/2009–10,ದಿನಾಂಕ:08–06–2009 ಮತ್ತು ಪತ್ರ ಸಂಖ್ಯೆ:ಆಯುಷ್/11/ಐಇಸಿ/2009–10.

ಪ್ರಸ್ತಾವನೆ:

ಮೇಲೆ ಓದಲಾದ ಕ್ರ.ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ, ಸರ್ಕಾರವು ರಾಜ್ಯದಲ್ಲಿ ಬರುವ ಎಲ್ಲಾ ತಾಲ್ಲೂಕು ಮಟ್ಟದ ಅಲೋಪತಿಕ್ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ರಚಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ರಾಜ್ಯದ ಎಲ್ಲಾ ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ರಚಿಸಿರುವಂತೆ, ಆಯುಷ್ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಆಯುಷ್ ಆಸ್ಪತ್ರೆಗಳಿಗೂ ಹಾಗೂ ಸರ್ಕಾರಿ ಆಯುಷ್ ಚಿಕಿತ್ಸಾಲಯಗಳಿಗೆ ಪ್ರತ್ಯೇಕವಾಗಿ ಆರೋಗ್ಯ ರಕ್ಷಾ ಸಮಿತಿಯನ್ನು ರಚಿಸಿ, ಆಯುಷ್ ಇಲಾಖೆಯ ಆಸ್ಪತ್ರೆಗಳಿಗೆ ಬಿಡುಗಡೆಯಾದ ಅನುದಾನವನ್ನು ಬಳಸುವ ಸಲುವಾಗಿ ಮಾರ್ಗಸೂಚಿಯನ್ನು ನೀಡಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಈ ಆಯುಷ್ ಆರೋಗ್ಯ ರಕ್ಷಾ ಸಮಿತಿಗಳ ರಚನೆಯ ಉದ್ದೇಶವೆಂದರೆ, ಆಯುಷ್ ಆರೋಗ್ಯ ರಕ್ಷಾ ಸಮಿತಿಯವರು ಆಯುಷ್ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳ ಸೌಲಭ್ಯವನ್ನು ಸುಧಾರಿಸಲು ಅಗತ್ಯವಿರುವ ಸಂಪನ್ಮೂಲಗಳನ್ನು ಸ್ಥಳೀಯವಾಗಿ ಕ್ರೋಢೀಕರಿಸುವುದು ಮತ್ತು ಅವುಗಳ ಸದ್ಬಳಕೆ, ಆಯುಷ್ ಪದ್ಧತಿಯ ವೈದ್ಯಕೀಯ ಚಿಕಿತ್ಸೆಯನ್ನು ಬಯಸಿ ಬರುವ ಸಾರ್ವಜನಿಕರಿಗೆ ಉತ್ತಮ ಆಯುಷ್ ವೈದ್ಯಕೀಯ ಚಿಕಿತ್ಸೆಗಳು ದೊರೆಯುವಂತೆ ನೋಡಿಕೊಳ್ಳುವುದು ಹಾಗೂ ಈ ಉದ್ದೇಶಕ್ಕಾಗಿ ಬಿಡುಗಡೆಯಾಗುವ ಅನುದಾನವನ್ನು ಇದೇ ಉದ್ದೇಶಕ್ಕೆ ಸೂಕ್ತ ರೀತಿಯಲ್ಲಿ ಬಳಕೆಯಾಗುವಂತೆ ನೋಡಿಕೊಳ್ಳುವುದೇ ಆಗಿರುತ್ತದೆ.

ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಆಸ್ಪತ್ರೆಗಳಿಗೆ ಬಿಡುಗಡೆಯಾದ ಅನುದಾನವನ್ನು ಸೂಕ್ತವಾಗಿ ಬಳಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಎಲ್ಲಾ ತಾಲ್ಲೂಕು ಮಟ್ಟದ ಆಸ್ಪತ್ರೆಗಳಿಗೆ ಆರೋಗ್ಯ ರಕ್ಷಾ ಸಮಿತಿಯನ್ನು ರಚಿಸಿರುವಂತೆ, ಆಯುಷ್ ಇಲಾಖೆಯ ಅಡಿಯಲ್ಲಿ ಬರುವ ಎಲ್ಲಾ ಆಯುಷ್ ಆಸ್ಪತ್ರೆಗಳಿಗೆ ಹಾಗೂ ಸರ್ಕಾರಿ ಆಯುಷ್ ಚಿಕಿತ್ಸಾಲಯಗಳಿಗೆ ಆರೋಗ್ಯ ರಕ್ಷಾ ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 165 ಪಿಐಎಂ 2009 ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯಲ್ಲಿ ಬರುವ ಎಲ್ಲಾ ಆಯುರ್ವೇದ ಆಸ್ಪತ್ರೆಗಳಿಗೆ ಹಾಗೂ ಸರ್ಕಾರಿ ಆಯುಷ್ ಚಿಕಿತ್ಸಾಲಯಗಳಿಗೆ ಈ ಕೆಳಕಂಡಂತೆ ಆರೋಗ್ಯ ರಕ್ಷಾ ಸಮಿತಿಯನ್ನು ರಚಿಸಿದೆ.

**ಆಯುಷ್ ಚಿಕಿತ್ಸಾಲಯಗಳ ಆರೋಗ್ಯ ರಕ್ಷಾ ಸಮಿತಿ:**

**ಅಧ್ಯಕ್ಷರು:** ಗ್ರಾಮ ಪಂಚಾಯಿತಿ ಸದಸ್ಯರು (ಆಯಾ ಚಿಕಿತ್ಸಾಲಯದ ವ್ಯಾಪ್ತಿಯ ವಾರ್ಡಿನಿಂದ ಆಯ್ಕೆಯಾಗಿರುವ ಗ್ರಾಮ ಪಂಚಾಯಿತಿ ಸದಸ್ಯರು).

**ಸದಸ್ಯರು:**

1) ಕೇಂದ್ರ ಸ್ಥಾನದ ಮಹಿಳಾ ಆರೋಗ್ಯ ಸಹಾಯಕಿ
2) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸ್ಥಳೀಯ ಪ್ರತಿನಿಧಿ
3) ಮಹಿಳಾ ಪ್ರತಿನಿಧಿ
4) ಸಾಮಾನ್ಯ ವರ್ಗದ ಪ್ರತಿನಿಧಿ
5) ಅಂಗನವಾಡಿ ಕಾರ್ಯಕರ್ತೆ
6) ಸ್ಥಳೀಯ ಶಾಲಾ ಮುಖ್ಯೋಪಾಧ್ಯಾಯರು
7) ಗ್ರಾಮ ಪಂಚಾಯತ್ ಕಾರ್ಯದರ್ಶಿ
8) ಅರಣ್ಯ ಪಾಲಕರು (ಪ್ರಾದೇಶಿಕ)
9) ಸರ್ಕಾರೇತರ ಪ್ರತಿನಿಧಿ

**ಸದಸ್ಯ ಕಾರ್ಯದರ್ಶಿ:** ವೈದ್ಯಾಧಿಕಾರಿ, ಆಯುಷ್ ಚಿಕಿತ್ಸಾಲಯ.

**ವಿಶೇಷ ಸೂಚನೆ:** ವಿವಿಧ ವರ್ಗದ ಪ್ರತಿನಿಧಿಗಳನ್ನು ಸಮಿತಿಯು ನಾಮ ನಿರ್ದೇಶನ ಮಾಡುವುದು.

**ತಾಲ್ಲೂಕುಗಳಲ್ಲಿನ ಆಯುಷ್ ಆಸ್ಪತ್ರೆಗಳಿಗೆ ಆರೋಗ್ಯ ರಕ್ಷಾ ಸಮಿತಿ:**

| | | |
|---|---|---|
| **1)** | ವಿಧಾನಸಭಾ ಸದಸ್ಯರು (ತಾಲ್ಲೂಕು ಕೇಂದ್ರದ ವ್ಯಾಪ್ತಿಯ) | : ಅಧ್ಯಕ್ಷರು |
| **2)** | ತಹಸೀಲ್ದಾರ್ / ಅವರ ಪ್ರತಿನಿಧಿ | : ಸದಸ್ಯರು |
| **3)** | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಾರ್ಯನಿರ್ವಹಣಾಧಿಕಾರಿಗಳ ಕಛೇರಿ, ತಾಲ್ಲೂಕು ಪಂಚಾಯತ್ ಉಪ ವಿಭಾಗ. | : ಸದಸ್ಯರು |

4) ವಲಯ ಶಿಕ್ಷಣಾಧಿಕಾರಿಗಳು (ಬಿಇಒ) : ಸದಸ್ಯರು
5) ರೇಂಜ್ ಫಾರೆಸ್ಟ್ ಆಫೀಸರ್ (ಪ್ರಾದೇಶಿಕ) : ಸದಸ್ಯರು
6) ಶಿಶು ಅಭಿವೃದ್ಧಿ ಅಧಿಕಾರಿಗಳು (ಸಿಡಿಪಿಒ) : ಸದಸ್ಯರು
7) ಅಧಿಕಾರೇತರ ಸದಸ್ಯರು (3) (ಈ ಸ್ಥಾನಗಳಲ್ಲಿ ಒಬ್ಬರು ಪರಿಶಿಷ್ಟ ಜಾತಿ ಮತ್ತು ಒಬ್ಬರು ಮಹಿಳೆ, ಒಬ್ಬರು ಸಾಮಾನ್ಯ ವರ್ಗ ಕಡ್ಡಾಯವಾಗಿ ಇರತಕ್ಕದ್ದು) : ಸದಸ್ಯರು
8) ತಾಲ್ಲೂಕಿನ ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಪ್ರಮುಖವಾಗಿ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಯ ಪ್ರತಿನಿಧಿ : ಸದಸ್ಯರು
9) ಆಡಳಿತ ವೈದ್ಯಾಧಿಕಾರಿ, ಸರ್ಕಾರಿ ಆಯುಷ್ ಆಸ್ಪತ್ರೆ. : ಸದಸ್ಯ ಕಾರ್ಯದರ್ಶಿ

**ವಿಶೇಷ ಸೂಚನೆ**: ಅಧಿಕಾರೇತರ ಸದಸ್ಯರು ಹಾಗೂ ಸರ್ಕಾರೇತರ (ಕ್ರಮ ಸಂಖ್ಯೆ:7 & 8) ಪ್ರತಿನಿಧಿಗಳನ್ನು ಸಮಿತಿಯು ನಾಮ ನಿರ್ದೇಶನ ಮಾಡುವುದು.

**ಜಿಲ್ಲಾ ಆಯುಷ್ ಆಸ್ಪತ್ರೆಗಳ ಆರೋಗ್ಯ ರಕ್ಷಾ ಸಮಿತಿ:**

1) ಜಿಲ್ಲಾಧಿಕಾರಿ : ಅಧ್ಯಕ್ಷರು
2) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್. : ಉಪಾಧ್ಯಕ್ಷರು
3) ಅರಣ್ಯ ಉಪ ಸಂರಕ್ಷಣಾಧಿಕಾರಿಗಳು : ಸದಸ್ಯರು
4) ವೈದ್ಯಾಧಿಕಾರಿ ದರ್ಜೆ–1 : ಸದಸ್ಯರು
5) ಮಹಾನಗರ ಪಾಲಿಕೆ /ನಗರ ಸಭಾಆಯುಕ್ತರು : ಸದಸ್ಯರು
6) ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ. : ಸದಸ್ಯರು
7) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. : ಸದಸ್ಯರು
8) ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ. : ಸದಸ್ಯರು
9) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ. : ಸದಸ್ಯರು
10) ಅಧಿಕಾರೇತರ ಸದಸ್ಯರು (3 ಸಂಖ್ಯೆ) ಒಂದು ಮಹಿಳೆ, ಒಂದು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಒಂದು ಸಾಮಾನ್ಯ ವರ್ಗ. : ಸದಸ್ಯರು
11) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು : ಸದಸ್ಯರು
12) ಜಿಲ್ಲಾ ಶಸ್ತ್ರ ಚಿಕಿತ್ಸಕರು : ಸದಸ್ಯರು
13) ಜಿಲ್ಲಾ ಆಯುಷ್ ಅಧಿಕಾರಿಗಳು : ಸದಸ್ಯ ಕಾರ್ಯದರ್ಶಿ

**ವಿಶೇಷ ಸೂಚನೆ**: ಅಧಿಕಾರೇತರ ಸದಸ್ಯರು ಹಾಗೂ ಸರ್ಕಾರೇತರ (ಕ್ರಮ ಸಂಖ್ಯೆ:10) ಪ್ರತಿನಿಧಿಗಳನ್ನು ಸಮಿತಿಯು ನಾಮ ನಿರ್ದೇಶನ ಮಾಡುವುದು.

**ಬೋಧಕ ಆಯುಷ್ ಆಸ್ಪತ್ರೆಗಳ ರಕ್ಷಾ ಸಮಿತಿ:**

1) ಜಿಲ್ಲಾಧಿಕಾರಿ : ಅಧ್ಯಕ್ಷರು
2) ಪಂಚಕರ್ಮ ವಿಭಾಗದ ಮುಖ್ಯಸ್ಥರು : ಸದಸ್ಯರು
3) ಆಸ್ಪತ್ರೆಯ ಸ್ಥಾಯಿ ವೈದ್ಯಾಧಿಕಾರಿಗಳು : ಸದಸ್ಯರು
4) ಕಾರ್ಪೊರೇಷನ್ / ಮುನ್ಸಿಪಲ್ ಕಮೀಷನರ್ : ಸದಸ್ಯರು
5) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ) : ಸದಸ್ಯರು

6) ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ. : ಸದಸ್ಯರು

7) ಉಪ ನಿರ್ದೇಶಕರು, : ಸದಸ್ಯರು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

8) ಉಪ ನಿರ್ದೇಶಕರು, : ಸದಸ್ಯರು
ಸಾರ್ವಜನಿಕ ಶಿಕ್ಷಣ ಇಲಾಖೆ.

9) ಸರ್ಕಾರಿ ಆಯುರ್ವೇದ ವೈದ್ಯಕೀಯ
ಮಹಾವಿದ್ಯಾಲಯದ ಪ್ರಾಚಾರ್ಯರು :ಸದಸ್ಯ ಕಾರ್ಯದರ್ಶಿ

ಸದರಿ ಆದೇಶದೊಂದಿಗೆ ಆಯುಷ್ ಆರೋಗ್ಯ ರಕ್ಷಾ ಸಮಿತಿಗೆ ಬಿಡುಗಡೆಯಾದ ಅನುದಾನದ ಬಳಕೆ ಬಗ್ಗೆ ಅನುಬಂಧ–1 ರಲ್ಲಿ, ಸರ್ಕಾರಿ ಆಯುರ್ವೇದ, ಯುನಾನಿ ಹೋಮಿಯೋಪತಿ ಚಿಕಿತ್ಸಾಲಯಗಳಿಗೆ ಉಪಕರಣಗಳು/ ಸಲಕರಣೆಗಳನ್ನು ಖರೀದಿಸುವ ಬಗ್ಗೆ ವಿವರಗಳನ್ನು ಅನುಬಂಧ–2 ರಲ್ಲಿ, ಸರ್ಕಾರಿ ಆಯುರ್ವೇದ ಆಸ್ಪತ್ರೆಗಳಿಗೆ ಉಪಕರಣಗಳು / ಸಲಕರಣೆಗಳನ್ನು ಖರೀದಿಸುವ ಬಗ್ಗೆ ವಿವರಗಳನ್ನು ಅನುಬಂಧ–3 ರಲ್ಲಿ ನಿಗದಿಪಡಿಸಿ, ಮಾರ್ಗಸೂಚಿಯನ್ನು ಅಳವಡಿಸಿದೆ. ಸದರಿ ಮಾರ್ಗಸೂಚಿಯನುಸಾರ ಸಮಿತಿಯು ಕಾರ್ಯನಿರ್ವಹಿಸುವುದು.

ಮಾರ್ಗಸೂಚಿಯಲ್ಲಿ ಅಡಕಗೊಳಿಸಿರುವ Statement-I & II ರ ನಮೂನೆಯಂತೆ ಮಾಸಿಕ ವೆಚ್ಚದ ವಿವರಗಳನ್ನು ಪ್ರತಿ ತಿಂಗಳು 5ನೇ ದಿನಾಂಕದೊಳಗಾಗಿ NRHM-SFM ಗೆ ತಲುಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಅನುಬಂಧ–I**
**ಕರ್ನಾಟಕ ಸರ್ಕಾರ**
**ಆಯುಷ್ ಇಲಾಖೆ**

**ಆಯುಷ್ ಆರೋಗ್ಯ ರಕ್ಷಾ ಸಮಿತಿಗಳಿಗೆ ಬಿಡುಗಡೆಯಾದ ಅನುದಾನದ ಬಳಕೆ ಬಗ್ಗೆ ಮಾರ್ಗಸೂಚಿ**

**1. ಪರಿಚಯ :**

ಭಾರತ ಸರ್ಕಾರದ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಕಾರ್ಯಕ್ರಮದ ಅಡಿಯಲ್ಲಿ ಗ್ರಾಮೀಣ ಜನರ ಆರೋಗ್ಯ ಸುಧಾರಣೆಗಾಗಿ ಇರುವ ಅನೇಕ ಪರಿಕಲ್ಪನೆಗಳಲ್ಲಿ "ಆರೋಗ್ಯ ರಕ್ಷಾ ಸಮಿತಿ"ಯೂ ಒಂದಾಗಿರುತ್ತದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಈಗಾಗಲೇ ಆರೋಗ್ಯ ರಕ್ಷಾ ಸಮಿತಿಗಳನ್ನು ಪಿಹೆಚ್‌ಸಿ / ಸಿಹೆಚ್‌ಸಿ ತಾಲ್ಲೂಕು, ಜಿಲ್ಲಾ ಮತ್ತು ಪ್ರಧಾನ ಆಸ್ಪತ್ರೆಗಳಿಗೆ ರಚಿಸಿಕೊಂಡಿದ್ದು, ಆ ಆರೋಗ್ಯ ರಕ್ಷಾ ಸಮಿತಿಗಳಿಗೆ ಬಿಡುಗಡೆ ಆಗುವ ಅನ್‌ಟೈಡ್ ಅನುದಾನವನ್ನು ಬಳಕೆ ಮಾಡಿಕೊಳ್ಳುವ ಬಗ್ಗೆ ಮಾರ್ಗಸೂಚಿಗಳನ್ನು ಸರ್ಕಾರವು ಹೊರಡಿಸಿರುತ್ತದೆ. ಅದೇ ರೀತಿಯಾಗಿ ಆಯುಷ್ ಇಲಾಖೆಯ ಆಯುಷ್ ಚಿಕಿತ್ಸಾಲಯ/ಆಸ್ಪತ್ರೆಗಳಿಗೆ ಜಿಲ್ಲಾ ಆಸ್ಪತ್ರೆಗಳಿಗೆ ಮತ್ತು ಆಯುರ್ವೇದ ಮಹಾವಿದ್ಯಾಲಯಗಳಿಗೆ ಹೊಂದಿಕೊಂಡಿರುವ ಪ್ರಧಾನ ಆಯುರ್ವೇದ ಆಸ್ಪತ್ರೆಗಳಿಗೆ ಆಯುಷ್ ಆರೋಗ್ಯ ರಕ್ಷಾ ಸಮಿತಿಗಳನ್ನು ರಚಿಸಿದ್ದು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಹೀಗೆ ರಚಿಸಲಾಗಿರುವ ಆಯುಷ್ ಆರೋಗ್ಯ ರಕ್ಷಾ ಸಮಿತಿಗಳು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಕಾರ್ಯಕ್ರಮದಡಿಯಲ್ಲಿ ಆಯುಷ್ ಇಲಾಖೆಯ ಆಯುರ್ವೇದ ಆಸ್ಪತ್ರೆಗಳಿಗೆ ತಲಾ ರೂ.50,000/– ದಂತೆ ಮತ್ತು ಸರ್ಕಾರಿ ಆಯುಷ್ ಚಿಕಿತ್ಸಾಲಯಗಳಿಗೆ ತಲಾ ರೂ.15,000/– ದಂತೆ ಬಿಡುಗಡೆಯಾಗುವ ವಾರ್ಷಿಕ ಅನ್‌ಟೈಡ್ ಅನುದಾನವನ್ನು ಬಳಕೆ ಮಾಡುವ ಮಾರ್ಗಸೂಚಿಗಳನ್ನು ಹೊರಡಿಸಿದೆ. ಆಯುರ್ವೇದ ಆಸ್ಪತ್ರೆಗಳಿಗೆ ಮತ್ತು ಆಯುಷ್ ಚಿಕಿತ್ಸಾಲಯಗಳಿಗೆ ಆಯುಷ್ ಪದ್ಧತಿಗಳ ವೈದ್ಯಕೀಯ ಚಿಕಿತ್ಸೆ ಬಯಸಿ ಬರುವ ಸಾರ್ವಜನಿಕರು ಮತ್ತು ಫಲಾನುಭವಿಗಳನ್ನು ಆಯುಷ್ ಇಲಾಖೆಯ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳಲ್ಲಿ ದೊರೆಯುವ ಆಯುಷ್ ಚಿಕಿತ್ಸಾ ಸೌಲಭ್ಯಗಳ ಪಾಲುದಾರರನ್ನಾಗಿ ಮಾಡುವುದೇ ಅಲ್ಲದೆ ಅವರ ಆರೋಗ್ಯ ಮತ್ತು ಯೋಗಕ್ಷೇಮಕ್ಕೆ ಅವರನ್ನೇ ಜವಾಬ್ದಾರರಾಗುವಂತೆ ಅವರ ಸಾಮರ್ಥ್ಯವನ್ನು ಬೆಳೆಸುವುದು ಹಾಗೂ ಸರ್ಕಾರಿ ಆಯುಷ್ ಚಿಕಿತ್ಸಾಲಯ ಮತ್ತು ಆಸ್ಪತ್ರೆಗಳಿಂದ ದೊರೆಯುವ ಸೇವಾ ಸೌಲಭ್ಯದ ಗುಣಮಟ್ಟದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವನ್ನು ನೀಡುವ ಮೂಲಕ ಗುಣಾತ್ಮಕ ಸೇವೆಗಳ ಭರವಸೆಯನ್ನು ನೀಡುವ ಒಂದು ಉತ್ತಮ ಕ್ರಮವಾಗಿರುತ್ತದೆ. ಮುಂಬರುವ ದಿನಗಳಲ್ಲಿ ಆಯುಷ್ ಆರೋಗ್ಯ ರಕ್ಷಾ ಸಮಿತಿಯವರು ಆಸ್ಪತ್ರೆ/ಚಿಕಿತ್ಸಾಲಯ ಸೌಲಭ್ಯವನ್ನು ಸುಧಾರಿಸಲು ಅಗತ್ಯವಿರುವ ಸಂಪನ್ಮೂಲವನ್ನು ಸ್ಥಳೀಯವಾಗಿ ಶೇಖರಣೆ ಮಾಡುವುದೂ ಅಲ್ಲದೆ ಅವುಗಳ ಸದ್ಬಳಕೆ ಬಗ್ಗೆ ನಿಗಾವಣೆ ಮಾಡುವ ಉದ್ದೇಶವೂ ಆಗಿರುತ್ತದೆ.

**2. ಆರೋಗ್ಯ ರಕ್ಷಾ ಸಮಿತಿಗಳ ಪರಿಕಲ್ಪನೆ:**

"ಆರೋಗ್ಯ ರಕ್ಷಾ ಸಮಿತಿ"ಯು ತಂತ್ರಜ್ಞರು, ವೃತ್ತಿಪರರು, ಅಧಿಕಾರಿಗಳು ಮತ್ತು ಸ್ಥಳೀಯ ನಾಗರೀಕರನ್ನೊಳಗೊಂಡ ನೋಂದಣಿಯಾದ ಸರಳ ವಿಶ್ವಸ್ಥ ಸಂಘಟನೆಯಾಗಿರುತ್ತದೆ. ಈ ಸಂಘಟನೆಯ ಉದ್ದೇಶ ಸ್ಥಳೀಯವಾಗಿ ಸಂಪನ್ಮೂಲಗಳನ್ನು ಕ್ರೋಡೀಕರಿಸಿ ಸೌಲಭ್ಯವನ್ನು ಸುಧಾರಣೆ ಮಾಡುವುದಲ್ಲದೇ ಗುಣಾತ್ಮಕ ಸೇವೆ ದೊರೆಯುವಂತೆ ಅಗತ್ಯವಿರುವ ಎಲ್ಲಾ ಕ್ರಮಗಳನ್ನು ಜರುಗಿಸಬಹುದಾಗಿದೆ. ವಿಶೇಷವಾಗಿ ನಗರ ಪ್ರದೇಶದಲ್ಲಿ ವಾಸಿಸುವ ಆರ್ಥಿಕವಾಗಿ ಹಿಂದುಳಿದಿರುವ ಮತ್ತು ಆರೋಗ್ಯ ಸೌಲಭ್ಯ ವಂಚಿತವಾಗಿರುವ ಜನರಿಗೆ ಆದ್ಯತಾ ಸೇವೆ ನೀಡಲು ಆರೋಗ್ಯ ರಕ್ಷಾ ಸಮಿತಿಯು ಕ್ರಮ ಕೈಗೊಳ್ಳಬಹುದಾಗಿರುತ್ತದೆ.

**3. ಉದ್ದೇಶ:**

ಆಯುಷ್ ಆಸ್ಪತ್ರೆಗಳಿಗೆ ಸೇವೆಯನ್ನನುಸರಿಸಿ ಬರುವ ರೋಗಿಗಳ ಸೌಕರ್ಯಕ್ಕಾಗಿ ಏನೆಲ್ಲ ಆಯುಷ್ ವೈದ್ಯಕೀಯ ಸೌಲಭ್ಯಗಳ ಅವಶ್ಯಕತೆ ಇದೆಯೋ ಅವುಗಳನ್ನು ಸರ್ಕಾರದ ಅನುದಾನ, ಬಳಕೆದಾರರ ಶುಲ್ಕ, ಸ್ಥಳೀಯ ದಾನಿಗಳಿಂದ ಸೇವೆ/ವಂತಿಕೆ ಮತ್ತಿತರೇ ಮೂಲಗಳಿಂದ ಒದಗಿಬಂದ ಸಂಪನ್ಮೂಲದಿಂದ ಭರಿಸಬಹುದಾಗಿರುತ್ತದೆ. ಒಟ್ಟಾರೆ ಆಯುಷ್ ಆಸ್ಪತ್ರೆ ಮತ್ತು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ/ಸ.ಯು.ಚಿ/ಸ.ಹೋ.ಚಿ. ಗಳಿಂದ ಗುಣಾತ್ಮಕ ಮತ್ತು ಪರಿಣಾಮಕಾರಿ ಮತ್ತು ಸೌಲಭ್ಯವಂಚಿತ ಬಡಜನರ ಆಧಾರಿತ ಸೇವಾ ಸೌಲಭ್ಯ ನೀಡಲು ಆರೋಗ್ಯ ರಕ್ಷಾ ಸಮಿತಿಗೆ ವಿಪುಲವಾದ ಅವಕಾಶಗಳಿರುತ್ತವೆ.

**4. ಚಟುವಟಿಕೆ ಮತ್ತು ಪ್ರಕಾರ್ಯಗಳು:**

ಆರೋಗ್ಯ ರಕ್ಷಾ ಸಮಿತಿಯು ತನಗೆ ಒದಗಿ ಬರುವ ಸಂಪನ್ಮೂಲವನ್ನು ಕೆಳಕಂಡಂತೆ ಬಳಸಬಹುದಾಗಿದೆ.

4.1 ಆಯುಷ್ ಆಸ್ಪತ್ರೆಗಳಿಗೆ ಬರುವ ರೋಗಿಗಳಿಗೆ ಆರೋಗ್ಯ ತೊಂದರೆಯನ್ನು ಗುರುತಿಸುವುದು.

4.2ರೋಗಿಗಳ ಚಿಕಿತ್ಸಾ ಕ್ರಮಕ್ಕೆ ಅಗತ್ಯವಿರುವ ಪಂಚಕರ್ಮ ಚಿಕಿತ್ಸಾ ಉಪಕರಣಗಳು ಮತ್ತು ಸಲಕರಣೆಗಳನ್ನು ಖರೀದಿಸುವುದು.(ಅನುಬಂಧ 1 ಮತ್ತು 2 ರಂತೆ)

4.3 ವೈದ್ಯರ ನಿರೀಕ್ಷಣೆಯಲ್ಲಿರುವ ರೋಗಿಗಳಿಗೆ ಆಸನದ ವ್ಯವಸ್ಥೆ, ರೋಗಿಗಳ ಸೌಲಭ್ಯಕ್ಕಾಗಿ ನೀರಿನ ವ್ಯವಸ್ಥೆ ಮಾಡುವುದು.

4.4 ಆಸ್ಪತ್ರೆಯ ತ್ಯಾಜ್ಯವಸ್ತುಗಳ ವಿಲೇ ಬಗ್ಗೆ ಕ್ರಮಕೈಗೊಳ್ಳುವುದು.

4.5 ರೋಗಿಗಳ ಹಿತರಕ್ಷಣೆಗಾಗಿ ಆರೋಗ್ಯ ರಕ್ಷಾ ಸಮಿತಿಯಲ್ಲಿ ಒಮ್ಮತದಿಂದ ತೀರ್ಮಾನಿಸಬಹುದಾದ ಯಾವುದೇ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸುವುದು.

4.6 ಸ್ಥಳೀಯ ದಾನಿಗಳನ್ನು ಸಂಪರ್ಕಿಸಿ ಆಯುಷ್ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳಿಗೆ ವಸ್ತು ರೂಪದಲ್ಲಿ ಅಥವಾ ಹಣದ ರೂಪದಲ್ಲಿ ವಂತಿಕೆ ನೀಡುವಂತೆ ಮನವೊಲಿಸುವುದು, ದಾನಿಗಳ ಹೆಸರಿನಲ್ಲಿ ವಿಸ್ತರಣಾ ಕೊಠಡಿಗಳನ್ನು ನಿರ್ಮಾಣ ಮಾಡುವುದು.

7. 4.7 ಹೊರ ಮತ್ತು ಒಳರೋಗಿಗಳ ಮನರಂಜನೆಗಾಗಿ ಮತ್ತು ಆಯುಷ್ ಪದ್ಧತಿಯ ಆರೋಗ್ಯ ಶಿಕ್ಷಣಕ್ಕಾಗಿ ಟಿ.ವಿ. ರೇಡಿಯೋ ಮುಂತಾದ ಮಾಧ್ಯಮಗಳನ್ನು ಅಳವಡಿಸುವುದು.

**5. ಸಂಪನ್ಮೂಲ ಕ್ರೋಢೀಕರಣ**

5.1 ಬಳಕೆದಾರರ ಶುಲ್ಕ

5.2 ದಾನಿಗಳಿಂದ ವಂತಿಗೆ

5.3 ಎನ್.ಆರ್.ಹೆಚ್.ಎಂ. / CSS / ಇತರೆ ಯಿಂದ ಅನುದಾನ

**6. ಎನ್ಆರ್ಹೆಚ್ಎಂ/CSS/ಇತರೆ ಅನುದಾನ**

6.1 ವಾರ್ಷಿಕ ರೂ.50,000 ಗಳನ್ನು ಆಯುಷ್ ಆಸ್ಪತ್ರೆಯ ಆರೋಗ್ಯ ರಕ್ಷಾ ಸಮಿತಿಗೆ ಪ್ರೋತ್ಸಾಹದ ಅನುದಾನದ ರೂಪದಲ್ಲಿ ನೀಡಲಾಗುತ್ತದೆ.

6.2 ವಾರ್ಷಿಕ ರೂ.15,000 ಗಳನ್ನು ಆಯುಷ್ ಚಿಕಿತ್ಸಾಲಯಗಳಿಗೆ ಇದೇ ಉದ್ದೇಶದಿಂದ ನೀಡಲಾಗುತ್ತದೆ.

**6.3. ಬ್ಯಾಂಕಿಂಗ್ ವ್ಯವಸ್ಥೆ**

6.3.1 ಎನ್ಆರ್ಹೆಚ್ಎಂ. / CSS / ಇತರೆ ಕಾರ್ಯಕ್ರಮದಿಂದ ಬಿಡುಗಡೆಯಾದ ಅನುದಾನವನ್ನು ಎಸ್.ಬಿ.ಐ, ಎಸ್.ಬಿ.ಎಂ. ಎಸ್.ಬಿ.ಹೆಚ್ ಮುಂತಾದ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಪ್ರತ್ಯೇಕ ಜಂಟಿ ಕೋರ್ ಬ್ಯಾಂಕಿಂಗ್ ಖಾತೆಯಲ್ಲಿಡಬೇಕು.

6.3.2 ಮೂಲ ಆರೋಗ್ಯ ರಕ್ಷಾ ಸಮಿತಿಯ ಖಾತೆ ಯಾರ ಜಂಟಿ ಹೆಸರಿನಲ್ಲಿದೆಯೋ ಅವರ ಹೆಸರಿನಲ್ಲಿಯೇ ಜಂಟಿ ಖಾತೆ ತೆರೆಯಬಹುದು.

**6.4 ಖರ್ಚಿನ ವಿಧಾನ**

6.41 ಈಗಾಗಲೇ ತಿಳಿಸಿರುವ ಸಾಮಾನ್ಯ ಅಥವಾ ಎನ್ಆರ್ಹೆಚ್ಎಂ/CSS/ಇತರೆ ವಿಶಿಷ್ಠ ಉದ್ದೇಶಗಳಿಗೆ ಆರೋಗ್ಯ ರಕ್ಷಾ ಸಮಿತಿ ತೀರ್ಮಾನದಂತೆ ಯಾವುದೇ ಕಾರ್ಯಕ್ರಮಗಳಿಗೆ ಒಂದೇ ಬಾರಿ ಸಗಟಾಗಿ ಅಥವಾ ವರ್ಷದಲ್ಲಿ ಬಿಡಿಯಾಗಿ ಖರ್ಚು ಮಾಡಬಹುದು.

6.42 ಅನ್ವಯವಾಗುವ ಎಲ್ಲಾ ಕಡೆ ಕೆ.ಟಿ.ಪಿ.ಪಿ ಕಾಯ್ದೆ ಅನುಸರಿಸಬೇಕು

6.43 ಈ ಅನುದಾನದಿಂದ ಸ್ಥಿರ ಆಸ್ತಿಯನ್ನು ರೂಢಿಸುವಂತಹ ಯಾವುದೇ ಖರ್ಚಿನ ಕಾರ್ಯಕ್ರಮವನ್ನು ಕೈಗೊಳ್ಳಬಾರದು.

**6.5 ನಿಷೇಧಿತ ಖರ್ಚುಗಳು**

ಕೆಳಗೆ ನಮೂದಿಸಿರುವ ಬಾಬುಗಳಿಗೆ ಎನ್‌ಆರ್‌ಹೆಚ್‌ಎಂ/CSS/ಇತರೆ ಅನುದಾನವನ್ನು ಬಳಸಬಾರದು.

6.5.1 ಲೇಖನ ಸಾಮಗ್ರಿ ಖರೀದಿ

6.5.2 ಪೂರ್ಣ/ಅರೆಕಾಲಿಕ ಸಿಬ್ಬಂದಿಗಳ ವೇತನ ಪ್ರೋತ್ಸಾಹಧನ ಇತ್ಯಾದಿ

6.5.3 ಪತ್ರಿಕೆಗಳಲ್ಲಿ ಜಾಹಿರಾತು ಸ್ವಾಸ್ಥ್ಯಮೇಳ

6.5.4 ವ್ಯಕ್ತಿಗಳಿಗೆ ಅಥವಾ ಗುಂಪುಗಳಿಗೆ ನಗದು ಅಥವಾ ವಸ್ತುರೂಪದಲ್ಲಿ ನೆನಪಿನ ಕಾಣಿಕೆ ನೀಡುವುದು.

6.5.5 ಯೋಜನೇತರ ಆವರ್ತಕ ಖರ್ಚುಗಳು

6.5.6 ತುರ್ತು ಸಂದರ್ಭದಲ್ಲಿ ರೋಗಿಯನ್ನು ಉನ್ನತ ದರ್ಜೆ ಆಸ್ಪತ್ರೆಗೆ ರವಾನಿಸುವ ಖರ್ಚನ್ನು ಹೊರತುಪಡಿಸಿ ವ್ಯಕ್ತಿಯಾಧಾರಿತ ವೆಚ್ಚಗಳು.

6.5.7 ಅಧಿಕಾರಿ ಮತ್ತು ಸಿಬ್ಬಂದಿಗಳ ಪ್ರವಾಸ ಭತ್ಯೆ.

**6.6. ಅನುದಾನ ಬಳಕೆ ಅನುಮತಿ**

6.6.1) ಎನ್‌ಆರ್‌ಹೆಚ್‌ಎಂ/CSS/ಇತರೆ ಅನುದಾನವನ್ನು ಬಳಸಲು ಆರೋಗ್ಯ ರಕ್ಷಾ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ. ಆದರೆ ಈಗಾಗಲೇ 6.5 ರಲ್ಲಿ ಪ್ರಸ್ತಾಪಿಸಲಾಗಿರುವ ಚಟುವಟಿಕೆಗಳಿಗೆ ಖರ್ಚು ಮಾಡಬಾರದು.

6.6.2) ಅನುದಾನವನ್ನು ಬಳಸಲು ರಾಜ್ಯಮಟ್ಟದಿಂದ ಯಾವುದೇ ಪೂರ್ವಾನುಮತಿಯ ಅವಶ್ಯಕತೆ ಇರುವುದಿಲ್ಲ.

**7.ಅನುದಾನ ಬಳಕೆ ಪೂರ್ವದಲ್ಲಿ ಅನುಸರಿಸಬೇಕಾದ ನಿಯಮಗಳು**

7.1 ಬೇಡಿಕೆ/ಕೊರತೆಗಳನ್ನು ಗುರುತಿಸುವುದು

7.1.1 ರೋಗಿಗಳು ಅವರ ಸಹಾಯಕರು, ಸಿಬ್ಬಂದಿ ವೈದ್ಯರು ಅಥವಾ ದೈನಂದಿನ ಆಡಳಿತ ವೈದ್ಯಾಧಿಕಾರಿಗಳು ಪರಿಕ್ರಮದಲ್ಲಿ ಗುರುತಿಸಬಹುದು.

7.1.2 ಆರೋಗ್ಯ ರಕ್ಷಾ ಸಮಿತಿಯವರ ರೋಗಿಗಳ ಬೇಡಿಕೆಯನ್ವಯ ಗುರುತಿಸಬಹುದು.

7.1.3 ಜಿಲ್ಲಾಧಿಕಾರಿಗಳು, ಜಿಲ್ಲಾ ಮಟ್ಟದ ಅಧಿಕಾರಿಗಳು ಮತ್ತು ಹಿರಿಯ ಅಧಿಕಾರಿಗಳ ಭೇಟಿಯ ಸಂದರ್ಭದಲ್ಲಿ ಗುರುತಿಸಬಹುದು.

7.1.4 ಚುನಾಯಿತ ಪ್ರತಿನಿಧಿಗಳು ಅಥವಾ ಮತ್ತಾವುದೇ ಮೂಲದಿಂದ ಗುರುತಿಸಲ್ಪಡಬಹುದು.

7.2 ಇಂತಹ ಎಲ್ಲಾ ಬೇಡಿಕೆ ಅಥವಾ ಕೊರತೆಗಳನ್ನು ಲಿಖಿತ ರೂಪದಲ್ಲಿ ಪಡೆದು ಆಂತರಿಕ ಸಂಗ್ರಹಣಾ ಸಮಿತಿಯ ಮುಂದೆ ಮಂಡಿಸುವುದು.

7.3 ಸ್ಥಾನಿಕ ವೈದ್ಯಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ತ್ರೀ ರೋಗ ತಜ್ಞರು, ಶುಶ್ರೂಷಕ ಅಧೀಕ್ಷಕರು ಮತ್ತು ಉಗ್ರಾಣಾಧಿಕಾರಿಗಳನ್ನೊಳಗೊಂಡ ಈ ಸಮಿತಿ ಬೇಡಿಕೆ/ಕೊರತೆ ಬಗ್ಗೆ ಆಡಳಿತ ವೈದ್ಯಾಧಿಕಾರಿಗಳು ಪರಿಶೀಲಿಸಿ ತನ್ನ ಶಿಫಾರಸ್ಸನ್ನು ನೀಡುವುದು.

7.4 ಆಂತರಿಕ ಸಂಗ್ರಹಣಾ ಸಮಿತಿಯ ಶಿಫಾರಸ್ಸನ್ನು ಆರೋಗ್ಯ ರಕ್ಷಾ ಸಮಿತಿಗೆ ಮಂಡಿಸಿ ಸಮಿತಿಯ ತೀರ್ಮಾನದಂತೆ ಮುಂದಿನ ಕ್ರಮಕೈಗೊಳ್ಳುವುದು.

7.5. ಅದೇ ರೀತಿ ಕ್ರಮಗಳನ್ನು ಆಯುಷ್ ಆಸ್ಪತ್ರೆಗಳಲ್ಲಿ ಆಡಳಿತ ವೈದ್ಯಾಧಿಕಾರಿಗಳೂ ಸಹ ಕೈಗೊಳ್ಳುವುದು.

**8) ವರದಿ**

ಮಾರ್ಗಸೂಚಿಯಲ್ಲಿ ಅಡಕಗೊಳಿಸಿರುವ Statement-I & II ರ ನಮೂನೆಯಂತೆ ಮಾಸಿಕ ವೆಚ್ಚದ ವಿವರವನ್ನು ಪ್ರತಿ ತಿಂಗಳು 5ನೇ ದಿನಾಂಕದೊಳಗಾಗಿ ಎನ್‌ಆರ್‌ಹೆಚ್‌ಎಂ–ಎಸ್.ಎಫ್.ಎಂ. ಗೆ ತಲುಪುವಂತೆ ಕಳುಹಿಸಿಕೊಡತಕ್ಕದ್ದು.

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಅನುಬಂಧ–II**

ಆಯುಷ್ (ಆಯುರ್ವೇದ/ಯುನಾನಿ/ಹೋಮಿಯೋಪತಿ) ಚಿಕಿತ್ಸಾಲಯಗಳಿಗೆ ಈ ಕೆಳಕಂಡಂತೆ ಉಪಕರಣಗಳು/ಸಲಕರಣೆಗಳನ್ನು ಚಿಕಿತ್ಸಾಲಯಕ್ಕೆ ತಲಾ ರೂ.15,000/– ಮಿತಿಯಲ್ಲಿ ಖರೀದಿಸಬಹುದಾಗಿರುತ್ತದೆ.

1) Massage Table

2) Gas stove, cylinder along with accessories.

3) Nadi sweda yanthra

4) Steel Vessels & other accessories

5) Measuring Jar

6) a) Kati basti yanthra

b) Janu basti yanthra etc. (Acrylic material)

7) Khalwa yanthra, surgical materials concerned to P.K.

8) Enema Can, Enema syringe, Bed Pan, Urine Pot

9) Netipot Jalaneti

10) Infant weighing machine

11) Gloves,

12) Bed side Screen,

13) Examination Table

14) Foot Step

15) Stethoscope

16) BP apparatus

17) Thermometer

18) Tongue depressor

19) ENT set

20) Knee hammer

21) First Aid Kit

22) Carpet for Yoga practice adequate size

Maintenance & other contingencies at not more than Rs.500/- at a time subject to the maximum of Rs.5000/- per year and ratification by the Arogya Raksha Samithi.

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಅನುಬಂಧ–III**

ಸರ್ಕಾರಿ ಆಯುರ್ವೇದ ಆಸ್ಪತ್ರೆಗಳಿಗೆ ಈ ಕೆಳಕಂಡಂತೆ ಉಪಕರಣಗಳು/ಸಲಕರಣೆಗಳನ್ನು ಆಸ್ಪತ್ರೆಗೆ ತಲಾ ರೂ.50,000/–ಮಿತಿಯಲ್ಲಿ ಖರೀದಿಸಬಹುದಾಗಿದೆ.

1) Massage table with Dhara stand & Patra

2) Steam Chamber

3) Gas stove, Cylinders along with accessories.

4) Nadi sweda yanthra

5) Steel Plastic accessories

6) Khalwa Yantra

7) Measuring glass

8) Enema Can Plastic

9) Enema Syringe (Plastic), Enema can, Bed pan, Urine Pot

10) Rubber cather

11) Acrylic material Equipments for

a) Kati Basti

b) Janu Basti

c) Akshi Tarpana

12) Jalaneti-Netipot
13) Carpets for Yoga practice adequate size
14) Kati Basti yantra
15) Diet Stand

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**PROFORMA**

NRHM FUNDS UTILISATION REPORT

STATEMENT -1 District Name of the Institution

| O/B of NRHM united Grants As on 1.4.2008 | FUNDS RECEIVED DURING 2008-09 | TOTAL FUNDS | FUNDS UTILISED UPTO LOST MONTH | FUNDS UTILISED CUMULATIVE DURING THE YEAR 2008-09 | CLOSING BALANCE |
|---|---|---|---|---|---|
| 1 | 2 | 3 | 4 | 5 | 6 |

STATEMENT – II

| Sl. No. | Cross Reference | DETAILS OF UTILISA TION | FUNDS UTILISED UPTO LOST MONTH | UTILISED DURING THE MONTH | CUMULA TIVE UTILISA TION | % UTILISA TION OF TOTAL |
|---|---|---|---|---|---|---|
| 1 | 4.2 Procurement of equipment, Drugs, safety kits etc., | | | | | |
| 2 | 4.3 Ambulance repairs | | | | | |
| 3 | 4.4. Hiring of Ambulance | | | | | |
| 4 | 4.5 Extension, repairs of building | | | | | |
| 5 | 4.6 AMC of Vehicles and Equipments | | | | | |
| 6 | 4.7 Drinking water, seating facilities to the patients | | | | | |
| 7 | 4.8 Entertainment & Health Education through Electronic Media | | | | | |
| 8 | 4.9 Disinfectants | | | | | |
| 9 | 4.10 Hospital waste Disposal | | | | | |
| 10 | 4.11 Referral of Patients to higher facility | | | | | |
| 11 | 4.12 Any other activities | | | | | |

P.R.2329

**N. MAHALAKSHMAMMA**
Under Secretary to Government,
Health & Family Welfare Department

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗದಗ ಜಿಲ್ಲೆ, ರೋಣ ತಾಲ್ಲೂಕು ಬೆಳಗೋಡ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ: ಸನೀಇ 129 ಅಪಿಬಂ 2008 ದಿನಾಂಕ 19.12.2008

2. ದಿನಾಂಕ 04.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎ.ಇ–3/2009–10/3940.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರುರವರ ದಿನಾಂಕ 16.7.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1726.

**ಪ್ರಸ್ತಾವನೆ:**

ಗದಗ ಜಿಲ್ಲೆ, ರೋಣ ತಾಲ್ಲೂಕು ಬೆಳಗೋಡ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 230.00ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 19.12.2008ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ರಾಜ್ಯ ಟೆಂಡರ್ ಬುಲೆಟಿನ್** | **28.01.2009** |
| **2** | **ಕರ್ನಾಟಕ ರಾಜ್ಯ ಪತ್ರ** | **22.01.2009** |
| **3** | **ವಿಜಯ ಕರ್ನಾಟಕ, ಟೈಮ್ಸ್ ಆಫ್ ಇಂಡಿಯಾ ಹಾಗೂ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ** | **13.02.2009** |
| **4** | **ಇಂಡಿಯನ್ ಎಕ್ಸ್ ಪ್ರೆಸ್ ಆಂಗ್ಲ ದಿನ ಪತ್ರಿಕೆ** | **14.02.2009** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 2 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್‌ಗಳನ್ನು ನಿಗದಿತ ದಿನಾಂಕದಂದು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 27.5.09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 05.06.09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ 2,13,34,145/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ 2,06,57,190/–** |

| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|---|
| **1** | **ವಿ.ಐ.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು** | **2,54,26,293/–** | **19.18 ಹೆಚ್ಚು** | **23.09 ಹೆಚ್ಚು** |
| **2** | **ಅಶೋಕ ಎಸ್ ಶೆಟ್ಟಿ 1ನೇ ದರ್ಜೆ ಗುತ್ತಿಗೆದಾರರು** | **2,62,82,015/–** | **23.19 ಹೆಚ್ಚು** | **27.23 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ. **ವಿ.ಐ.ಶೆಟ್ಟಿ,** 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 2,54,26,293/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಟೆಂಡರ್ ನಲ್ಲಿ ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 23.09ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 15.7.09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. **2,06,57,190–00**ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ

ರೂ. 2,36,52,483–00ಗಳಿಗೆ ಕಾಮಗಾರಿಯನ್ನು ಶ್ರೀ. ವಿ.ಎಂ ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 40 ಅಪಿಬಂ 2009, ಬೆಂಗಳೂರು, ದಿನಾಂಕ 22ನೇ ಜುಲೈ, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ, ರೋಣ ತಾಲ್ಲೂಕು ಬೆಳಗೋಡ ಗ್ರಾಮದ ಹತ್ತಿರ ಬ್ಯಾರೇಜ್ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. **2,06,57,190–00**ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,36,52,483–00–ಗಳಿಗೆ (ಎರಡು ಕೋಟಿ ಮೂವತ್ತಾರು ಲಕ್ಷದ ಐವತ್ತೆರಡು ಸಾವಿರದ ನಾನೂರ ಎಂಬತ್ತೆರಡು ರೂ.ಗಳು ಮಾತ್ರ) ಶ್ರೀ ವಿ.ಎಂ. ಹೆಬ್ಬಾಳ 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2042

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ENERGY SECRETARIAT

**Sub :** Reimbursement of Professional Fees of Advocates appeared on behalf of Government of Karnataka before the Hon'ble Supreme Court in the matter of GMR Energy Limited and another.

**Read :** 1 G.O. EN 16 PPC 2009 dated:26.3.2009

2 G.O. EN 16 PPC 2009 dated:8.4.2009

3 G.O. EN 16 PPC 2009 dated:28.4.2009

**PREAMBLE:**

M/s GMR Energy filed a case in the Hon'ble High Court of Karnataka challenging action of the State Government in imposing Section 11 of Electricity Act 2003 directive and also contesting the rate of Rs. 5.50 Kwh in Writ petition No.590/591 of 2008 before the Single Judge. Hon'ble High Court of Karnataka had asked the Karnataka Electricity Regulatory Commission (KERC) to fix the tariff for the energy purchased from M/s GMR Energy Limited KERC recommended the tariff of Rs. 6.75 per Kwh as against Rs. 5.50 per Kwh fixed earlier. The Single Judge of the High Court of Karnataka was not satisfied with the recommendations of the KERC.

2. M/s GMR Energy Limited have filed a SLP in No.7792-93 before the Hon'ble Supreme Court of India on 30.3.2009 and was heard on 1.4.2009 The Supreme Court had directed to pay the tariff fixed by the KERC till then.

3. In view of the enormous implication of the case, the challenge to the Section 11 directive of the Electricity Act 2003 issued by the State Government and the financial implications which may arise in the wake of a Court Order revising the tariffs and for the effective representations from the State

Government who are Respondent No.1 State Government decided to utilize the services of Additional Solicitor General of India, New Delhi and Senior Advocate ,Supreme Court of India, New Delhi

4. Finance Department has given its concurrence for hiring the services of Sri Gopal Subramanyam/Senior Advocates, depending on availability to represent the State of Karnataka in the above matter.

5. Based on this, Head of Legal Cell of Energy Department vide G.O. read at (2) above has authorized Smt. Anitha Shenoy, Advocate Supreme Court of India, New Delhi to appose the Special Leave Petition (Civil) No. 7792-93/2009 before the Supreme Court of India and to take the assistance of Sri Gopal Subramanyam, Additional Solicitor General, New Delhi or any other Senior Counsel to defend on the above case.

6. Energy Department had received the following Professional fee Bills of Rs. 5.80 lakhs from the Advocates appeared on behalf of Government of Karnataka in the above petitions and the same have been paid by BESCOM subject to reimbursement by Government.

| Sl.No | Details | Amount paid by BESCOMs & to be Reimbursed to BESCOM | Details of Payment |
|---|---|---|---|
| 1 | Special Leave Petition (Civil) No. 7792-93/2009 Sri G.E. Vahanvati Solicitor General of India | Rs. 2,20,000/ | BESCOM vide DD No. 566714 dated 21..4.2009 P.No.203 of C/S |
| 2 | Special Leave Petition (Civil) No 7792-93/2009 Smt Anitha Shenoy, Advocate Supreme Court of India, New Delhi | Rs. 30.000/- | BESCOM Vide DD No. 566780 dated 22.4.2009 P.No. 282 of C/S |
| 3 | Filling of Caveat in the proposed SLP No. 7792-93/2009 in the matter of GMR Energy Limited & anothers vs State of Karnataka arising out of the Judgment dated 19.3.2009 in WA No. 703-704/2009 Sri L. Nageshwar Rao, Senior Advocate, Supreme Court of India, New Delhi | Rs. 1,10,000/- After deducting the Income Tax DD drawn for Rs. 97, 537/- | BESCOM Vide DD No. 567228 dated 26.5.2009. |
| 4 | Special Leave Petition Nos. 10928-29/2009 in the matter of GMR Energy Limited & another versus State of Karnataka & others | Rs. 2,20,000/- After deducting the Income Tax DD drawn for Rs. 1,95,074/- | BESCOM vide DD No568317 dated :30.7.09 for Rs .1,75,074 & DD No. 568315 dated 30.07.09 for Rs. 20,000/- |

**Government Order No. EN 16 PPC 2009, Bangalore Dated 24th September, 2009**

In the circumstances explained above, Government are pleased to reimburse a sum Rs.5.80 lakhs (Rupees Five lakh Eighty thousand only) to Bangalore Electricity Supply Company (BESCOM) being Professsional Fees of the Advocates appeared on behalf of Government of Karnataka as mentioned in the Preamble at para (6) The expenditure shall be met under the Head of account 2801-80-101-1-04-106(NP).

BESCOM shall obtain the counter signature of principal Secretary to Government, Energy Department on payee's receipt and draw the amount.

This order is issued with concurrence of Finance Department vide their Note No.FD 1124 EXP-I/2009 dated 15.7.2009.

By Order and in the Name of the Governor of Karnataka,

P.R. 2271

**S.J. SAMPATH KUMAR**

Under Secretary to Government

Energy Department

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಹೆಚ್.ಕೆ. ಗಣೇಶ್, ತಹಶೀಲ್ದಾರ್ ಗ್ರೇಡ್–2 ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರ ಸ್ವಯಂ ನಿವೃತ್ತಿಗೆ ಅನುಮತಿ ನೀಡುವ ಕುರಿತು ಆದೇಶ.

**ಓದಲಾಗಿದೆ :** 1 ಉಪಪ್ರಾಚಾರ್ಯರು, ಚಿಕ್ಕಮಗಳೂರು ಇವರ ಮನವಿ ದಿನಾಂಕ:13.7.2009

2. ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪತ್ರ ಸಮ:ಸಿಬ್ಬಂದಿ (2)/ವಿವ–91/2009–10, ದಿನಾಂಕ: 20.7.2009.

3. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಅವರ ಪತ್ರ ಸಂ:ಸಿಬ್ಬಂದಿ(1)ವಿವ/76/2009–10, ದಿನಾಂಕ 24.9.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1)ರ ದಿನಾಂಕ:13.7.2009ರ ಮನವಿಯಲ್ಲಿ ಶ್ರೀ ಹೆಚ್.ಕೆ. ಗಣೇಶ್, (ತಹಶೀಲ್ದಾರ್ ಗ್ರೇಡ್–2) ಉಪಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರು ಗೃಹ ಕೃತ್ಯದ ಕಾರಣ ಹಾಗೂ ಅನಾರೋಗ್ಯದ ನಿಮಿತ್ತ ದಿನಾಂಕ:31.10.2009ರಿಂದ ಅನ್ವಯವಾಗುವಂತೆ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285 (1)(ಎ) ರಡಿ ಸ್ವಯಂ ನಿವೃತ್ತಿ ಕೋರಿ ಮನವಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ:20.7.2009ರ ಪತ್ರದಲ್ಲಿ ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ರವರು ಶ್ರೀ ಹೆಚ್.ಕೆ. ಗಣೇಶ್ ಉಪ ಪ್ರಾಚಾರ್ಯರು, ಚಿಕ್ಕಮಗಳೂರು ಇವರು ಮೂಲತಃ ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದಕ್ಕೆ ಸೇರಿದವರಾಗಿದ್ದು, ಇವರು ದಿನಾಂಕ:31.10.2009ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಲು ಕೋರಿದ್ದು, ಈ ಬಗ್ಗೆ ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

ಶ್ರೀ ಹೆಚ್.ಕೆ. ಗಣೇಶ್, ಉಪಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರು ಈ ಹಿಂದೆ ತುಮಕೂರು ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸಿದ್ದು, ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ ಮತ್ತು ಅಧಿಕಾರಿಯಿಂದ ಸರ್ಕಾರಕ್ಕೆ ಯಾವುದೇ ಹಣಕಾಸಿನ ಬಾಕಿ ಬರಬೇಕಾಗಿರುವುದಿಲ್ಲವೆಂದು ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ:24.9.2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ವರದಿಯನ್ನು ಸರ್ಕಾರಕ್ಕೆ ನೀಡಿರುತ್ತಾರೆ.

ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪ್ರಸ್ತಾವನೆ ಹಾಗೂ ಹೆಚ್.ಕೆ. ಗಣೇಶ್, ತಹಶೀಲ್ದಾರ್ ಅವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಸದರಿಯವರು ದಿನಾಂಕ:30.4.1954ರಂದು ಜನಿಸಿದ್ದು, ಸರ್ಕಾರಿ ಸೇವೆಗೆ ನೇರ ನೇಮಕಾತಿ ಮೂಲಕ ದಿನಾಂಕ:14.2.1977ರಂದು ನೇಮಕ ಹೊಂದಿ, ದಿನಾಂಕ:31.10.2009ರ ಅಂತ್ಯಕ್ಕೆ ಸೇವೆಯನ್ನು ಪೂರೈಸುತ್ತಾರೆ. ಈ ಅಧಿಕಾರಿಯ ವಿರುದ್ಧ ಸರ್ಕಾರದ ಹಂತದಲ್ಲಿ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಸದರಿ ಅಧಿಕಾರಿಗೆ ದಿನಾಂಕ:31.10.2009 ರಿಂದ ಸ್ವಯಂ, ನಿವೃತ್ತಿ ಹೊಂದಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 469 ಎಎಸ್‌ಡಿ 2009, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್,2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಹೆಚ್.ಕೆ. ಗಣೇಶ್, ಉಪ ಪ್ರಾಚಾರ್ಯರು, (ತಹಶೀಲ್ದಾರ್ ಗ್ರೇಡ್–2) ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285(1)(ಎ) ರ ಅಡಿ ದಿನಾಂಕ:31.10.2009ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವ ಇಚ್ಚಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2502

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಸೇವೆಗಳು–3)